

ಸಾರಿದೆನೋ ನಿನ್ನ ವೆಂಕಟರನ್ನ ॥ ಪ ॥

ನೀರಜನಯನನೆ ನಿರ್ಮಲ ಗುಣಪೂರ್ಣ ॥ ಅ.ಪ ॥

ಅನಾಥನೋ ನಾನು ಎನಗೆ ಬಂಧುವೊ ನೀನು
ನಿನ್ನವನೆಂದು ನೋಡೊ ನೀನಾಗಿ ದಯಮಾಡೊ 1

ಎನ್ನ ಕುಂದುಗಳನ್ನು ಎಣಿಸಲಾಗದೊ ದೇವ
ಪನ್ನಗಾದ್ರಿವಾಸ ನೀನೆ ನಿರ್ದೋಷ 2

ದೇಶ ದೇಶದವರ ಪೊರೆವಂತೆ ಪೊರೆಯೆನ್ನ
ಶೇಷಾಚಲ ಘನ್ನ ಶ್ರೀಶ ಶ್ರೀ ಹಯವದನ 3

— ಶ್ರೀ ವಾದಿರಾಜರು




ಗೌರವ ಸಂಪಾದಕರು :
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





**ಸಂಪುಟ ೧೫]　　ಮಾರ್ಚ್ ೧೯೮೫　　[ಸಂಚಿಕೆ ೧೦**


# ವಿಷಯಸೂಚಿ



ಮುಖ ಚಿತ್ರ : ಪರಮಪದಂ – ಚಿತ್ರ : ಎ. ರಾಮಚಂದ್ರಯ್ಯ.
ಹಿಂಬದಿಯಲ್ಲಿ : ಯುಗಾದಿ – ಚಿತ್ರ : ಪೇಟಶ್ರೀ.
ಒಳಗಡೆ : 1 ತಿರುಮಲೆಯ ವಸಂತೋತ್ಸವದಲ್ಲಿ ರಥೋತ್ಸವ.
2 ಭಕ್ತಿ ಸಾಂಸ್ಕೃತಿಕ ಕಾರ್ಯಕ್ರಮ.

# ಸಂಪಾದಕೀಯ

ಹೆಸರೇಕಿಡುತ್ತಾರೆ ಎಂದಾಗ ಹಿರಿಯ ಕೆಲಸಗಳನ್ನು ಮಾಡಲು ಎಂದರೆ ಆಶ್ಚರ್ಯವಿಲ್ಲ. ಹಿರಿಯರಿಗೆಲ್ಲ ಅವು ಸಾರ್ಥಕನಾಮಗಳೂ ಆದವು. ರಾಮನೆಂಬ ಹೆಸರು ತಾರಕನಾಮವೂ ಆಯಿತು. ಕೃಷ್ಣನೆಂಬ ಹೆಸರು ವೈಯಕ್ತಿಕವಾಗಿ ಸಾಮಾಜಿಕವಾಗಿ ಅಂತರ್ಗತವಾಗಿರುತ್ತ ನಡೆಸುವ ಅನಂತ ಪ್ರಬೋಧಕ ಶಕ್ತಿಗೇ ಪ್ರತೀಕವಾಯಿತು. ಪೌಲಸ್ತ್ಯನೆನ್ನುವ ದಶಕಂಠನಿಗೆ ರಾವಣನೆನ್ನುವ ಹೆಸರು ಬಂದ ಬಗೆಯನ್ನು ಪುರಾಣ ಕಥೆಗಳು ವಿವರಿಸುತ್ತಿವೆ. ಹಲವಾರು ಸಂದರ್ಭಗಳಲ್ಲಿ ಅಸಲು ಹೆಸರು ಅಡಿ ಸೇರಿ ಗೌಣಕ್ಕೆ ಪ್ರಾಧಾನ್ಯ ಹೆಚ್ಚಿದೆ. ಸುಶಾಸನನು ದುಶ್ಶಾಸನನಾದದ್ದು, ರಾವಣಕುಮಾರನು ಇಂದ್ರಜಿತ್ತುವಾದದ್ದು ಗುಣ ಪ್ರಧಾನ್ಯದಿಂದ. ಇವೆಲ್ಲವರಿಂದ ನಮ್ಮ ಪೂರ್ವಿಕರು ನಾಮಕರಣ ಸಂದರ್ಭದಲ್ಲಿ ತಾವು ಊಹಿಸಿದುದಕ್ಕೋ ಆಶಿಸಿದ್ದಕ್ಕೋ ಅವಧಾರಣೆ ನೀಡಿದರೆಂಬುದು ಸ್ಪಷ್ಟ.

ಹೀಗೆಂದು ವಿಪರೀತವಾದ, ಬುಡಮೇಲಾದ ಪದಗಳೂ ಇಲ್ಲದೆ ಇಲ್ಲ. ಬ್ರಹ್ಮನ ಮೊದಲ ಸೃಷ್ಟಿಯಲ್ಲಿ ಎರಡು ಬಗೆಯ ಜೀವಿಗಳು ಹೊರಬಂದವರಂತೆ. ಅವರಲ್ಲೊಂದು ವರ್ಗ ಜಕ್ಷ, ಜಕ್ಷ (ಹಿಡಿ, ಹಿಡಿ)ಎಂದು ಬ್ರಹ್ಮನ ಮೇಲೆ ಬಿದ್ದರೆ, ಇನ್ನೊಂದು ವರ್ಗ ರಕ್ಷ, ರಕ್ಷ ಎಂದು ಅವರಿಗೆ ಅಡ್ಡಬಂದರು. ತಿನ್ನು ತಿನ್ನು ಎಂದು ಕೂಗಿದವರು ಜಕ್ಷರಾಗಿ ಕಾಲಕ್ರಮೇಣ ಯಕ್ಷರಾಗಿ ದೇವಲೋಕಗಳಲ್ಲಿ ಹಾರಾಡುತ್ತಿರುವುದು, ರಕ್ಷ ರಕ್ಷ ಎಂದವರು ರಾಕ್ಷಸರಾಗಿ ಪಾತಾಳವನ್ನು ಸೇರಿದ್ದು ಹೆಸರು ಹಾಳಾದ್ದಕ್ಕೆ ನಿದರ್ಶನ. ಹೀಗೆ ಬರುತ್ತ ಬರುತ್ತ ಹೆಸರು ಹಿರಿಮೆಯನ್ನು ಕಳೆದುಕೊಂಡಿತು.

ಇನ್ನು ವರ್ಷಗಳ ಹೆಸರುಗಳನ್ನು ಗಮನಿಸಿದರೆ ಒಳ್ಳೆಯವಕ್ಕೆ ಇರುವ ಹಳಿತಿಗಿಂತ ಕೆಟ್ಟವಕ್ಕಿರುವ ಕೆಡುಕೇ ಹೆಚ್ಚು. ಸೌಮ್ಯ ಎಷ್ಟು ಸೌಮ್ಯವಾಗಿದ್ದಿತು, ಆನಂದ ಎಷ್ಟು ಆನಂದಪ್ರದವಾಗಿದ್ದಿತು ಎಂಬುದು ಮರೆತಿರುವುದಾದರೂ, 'ಧಾತ' ಕ್ಷಾಮ ಮಾತ್ರ ಸರ್ವರಿಗೂ ತಿಳಿದದ್ದು. ರುಧಿರೋದ್ಗಾರಿಯಲ್ಲಿ ನಡೆದ ವಿಪತ್ಕರ ಪರಿಸ್ಥಿತಿ ಮುಗಿಯಿತೆಂದೂ ರಕ್ತಾಕ್ಷಿ-ಹೆಸರನ್ನು ಹಿಡಿದಾದರೂ-ಅಷ್ಟು ಕೆಟ್ಟದಲ್ಲವೆಂದೂ, ಅನುರಕ್ತಾಕ್ಷಿಯಾಗಿ ಪರಿವರ್ತಿತವಾಗುವುದೆಂದೂ ಭಾವಿಸಿದೆವು; ಆಶಿಸಿದೆವು. ಆದರೆ ಭಾಷಾ ಮತ ಕುಲ ಬೇಧಗಳೆಬ್ಬಿಸಿದ ಹೊಟ್ಟೆಯುರಿಯ ಜ್ವಾಲೆಗಳು ಅಮೃತ ಸರಸ್ಸಿನಲ್ಲಿ ಅಗ್ನಿಪರ್ವತವಾಗಿ ನಂತರ ದಾರುಣವಾಗಿ, ಮಾರಣವಾಗಿದ್ದರೆ, ಮನುಷ್ಯನಿರ್ಮಿತ ಮಂದಪವನ ಮೃತ್ಯುವಾಗಿ ಮೂರುಸಾವಿರಮಂದಿಯನ್ನು ಕೊಂಡದ್ದನ್ನು ನೋಡಬೇಕಾಯಿತು.

ಈ ರೀತಿಯಾಗಿ ಈ ಸಂವತ್ಸರ ಅತಿಭಯಂಕರವಾಗಿ ತನ್ನ ಹೆಸರನ್ನು-ರಕ್ತಾಕ್ಷಿ (ನೆತ್ತರು ಚಿಮ್ಮುವ ಕಣ್ಣು)-ಸಾರ್ಥಕ ಪಡಿಸಿಕೊಂಡಿತು. ಹೆಸರಿನಲ್ಲಿಯೇ ಭಯಂಕರತೆ ತುಂಬಿದೆ. ಅನ್ನಮಯ್ಯ ಹೇಳಿದ ಮಾತು 'ಹುಟ್ಟುವುದೂ ನಿಜ, ಸಾಯುವುದೂ ನಿಜ, ನಡುವಿನದೊಂದು ನಾಟಕ' ಎಂಬ ಮಾತು ನಿಜವೆನ್ನಿಸುತ್ತದೆ. ಆದರೆ ಆಶಾಪಾಶವೆನ್ನುವುದು ಮನುಷ್ಯನನ್ನು ಮತ್ತೆ ಮತ್ತೆ ಸೆಳೆಯುತ್ತದೆ. ಮುಳ್ಳಿನ ಮೊನೆಯಲ್ಲೂ ಬಂಗಾರದ ಬಟ್ಟೆಯನ್ನೇ ನೋಡುತ್ತದೆ. ಹಾಗಾಗಿಯೇ ಕ್ರೋಧನವಾದರೂ ಶ್ರೀನಿವಾಸನ ಕರುಣೆಯಿಂದ ಅಕ್ರೋಧನವಾಗಿ ಮಾರ್ಪಡುತ್ತದೆಯೆಂದೂ, ಮನುಷ್ಯನ ಮಾತು, ನೀತಿ, ರೀತಿಗಳು ಒಳ್ಳೆಯ ತಿರುವುಗಳನ್ನು ಪಡೆಯುವುದೆಂದೂ ಆಶಿಸೋಣ.

# ಕನ್ನಡದಲ್ಲಿ ರಾಮಾಯಣಗಳು

ಡಾ॥ ಎನ್. ಅನಂತರಂಗಾಚಾರ್

ಕಾಲದೃಷ್ಟಿಯಿಂದ ರಾಮಾಯಣವನ್ನು ರಚಿಸಿದ ಭಾರತದ ದೇಶೀಯ ಭಾಷೆಗಳಲ್ಲಿ ಕನ್ನಡಕ್ಕೆ ಎರಡನೆಯ ಸ್ಥಾನ ದೊರಕುವುದು. ಕನ್ನಡದ ಮೊದಲನೆಯ ರಾಮಾಯಣವು ಯಾವುದೆಂದು ಖಚಿತವಾಗಿ ತಿಳಿಯಲು ಸಾಧ್ಯವಿಲ್ಲ. ಒಂಭತ್ತನೆಯ ಶತಮಾನದ ಉತ್ತರಾರ್ಧದಲ್ಲಿ ರಚಿತವಾದ ನೃಪತುಂಗನ 'ಕವಿರಾಜಮಾರ್ಗ'ದಲ್ಲಿ ಲಕ್ಷ್ಯವಾಗಿ ಉದಹರಿಸಿರುವ ಪದ್ಯಗಳಲ್ಲಿ ಕೆಲವು ರಾಮಾಯಣಕ್ಕೆ ಸಂಬಂಧಪಟ್ಟವಾಗಿರುತ್ತವೆ. ಇವಕ್ಕೆ ಆಕರವಾವುದು ಎಂಬುದು ತಿಳಿಯದು. ಕ್ರಿ. ಶ. ೯೫೦ ರಲ್ಲಿದ್ದ ಪೊನ್ನ ಕವಿಯು ತನ್ನ 'ಶಾಂತಿಪುರಾಣ'ದಲ್ಲಿ ತಾನು ೧೬ ಆಶ್ವಾಸಗಳುಳ್ಳ 'ಭುವನೈಕ ರಾಮಾಭ್ಯುದಯ'ವೆಂಬ ರಾಮ ಕಥೆಯನ್ನು ಬರೆದಿರುವುದಾಗಿ ಹೇಳಿಕೊಂಡಿದ್ದಾನೆ. ಈ ಗ್ರಂಥವು ಉಪಲಬ್ಧವಲ್ಲವಾಗಿರುವುದರಿಂದ ಇದು ಯಾವ ಸಂಪ್ರದಾಯಕ್ಕೆ ಸೇರಿದುದೆಂಬುದನ್ನು ಹೇಳಲು ಸಾಧ್ಯವಿಲ್ಲ. ಆದರೂ ಇವನಿಗೆ ಹಿಂದಿದ್ದ ಪಂಪನ ಹಾಗೆಯೇ ಇವನೂ ಒಂದು ಪುರಾಣ ಗ್ರಂಥವನ್ನೂ ಒಂದು ಲೌಕಿಕ ಗ್ರಂಥವನ್ನೂ ರಚಿಸಿರುವುದರಿಂದ ಪಂಪನ ಲೌಕಿಕ ಗ್ರಂಥವಾದ 'ವಿಕ್ರಮಾರ್ಜುನವಿಜಯ'ದಂತೆ ಇವನ 'ಭುವನೈಕರಾಮಾಭ್ಯುದಯ'ವೂ ವೈದಿಕ ಸಂಪ್ರದಾಯದ್ದೇ ಇರಬೇಕು.

ಸುಮಾರು ಕ್ರಿ. ಶ. ೧೧೦೦ರಲ್ಲಿದ್ದ ನಾಗಚಂದ್ರನ 'ರಾಮಚಂದ್ರ ಚರಿತಪುರಾಣ'ವೇ ಈಗ ಸಂಪೂರ್ಣವಾಗಿ ದೊರೆತಿರುವ ಮೊದಲನೆಯ ಕನ್ನಡ ರಾಮಾಯಣ. ಇವನ ಗ್ರಂಥಕ್ಕೆ 'ಪಂಪ ರಾಮಾಯಣ'ವೆಂಬ ರೂಢಿಯ ಹೆಸರಿದೆ. ನಾಗಚಂದ್ರನಿಗೆ 'ಅಭಿನವಪಂಪ' ಎಂಬ ಬಿರುದಿದ್ದುದರಿಂದ ಅವನ ಗ್ರಂಥಕ್ಕೆ ಈ ಹೆಸರು ಬಂದಿರಬೇಕು. ಇವನ ಊರು ವಿಜಯಪುರ. ಇದು ಈಗಿನ ಬಿಜಾಪುರವಿರಬಹುದು. ಇವನಿಗೆ ಕವಿತಾಮನೋಹರ, ಭಾರತೀಕರ್ಣಪೂರ, ಸಾಹಿತ್ಯವಿದ್ಯಾಧರ ಮೊದಲಾದ ಇತರ ಬಿರುದುಗಳಿದ್ದವು. ಇವನು 'ಮಲ್ಲಿನಾಥ ಪುರಾಣ'ವೆಂಬ ಮತ್ತೊಂದು ಜೈನ ಪುರಾಣವನ್ನೂ ರಚಿಸಿದ್ದಾನೆ.

ಇವನ 'ರಾಮಚಂದ್ರ ಚರಿತ ಪುರಾಣ' ಒಂದು ಜೈನ ರಾಮಾಯಣ. ಇದಕ್ಕೆ ವಿಮಲಸೂರಿಯ 'ಪಉಮಚರಿಯ' ಮತ್ತು ರವಿಷೇಣನ 'ಪದ್ಮ ಪುರಾಣ'ಗಳೇ ಆಕರಗಳು. ಆದರೂ ವಿಮಲಸೂರಿಯ ಕಥಾ ಸರಣಿಯನ್ನೇ ವಿಶೇಷವಾಗಿ ಅನುಸರಿಸಿದ್ದಾನೆ. ರವಿಷೇಣನ ಪ್ರಭಾವವೂ ಎದ್ದುಕಾಣುತ್ತದೆ. ರವಿಷೇಣನ ಸಂಸ್ಕೃತ ಭಾಷೆಯ 'ಪದ್ಮ ಪುರಾಣ'ಕ್ಕೂ ವಿಮಲಸೂರಿಯ ಪ್ರಾಕೃತಭಾಷೆಯ 'ಪಉಮಚರಿಯ'ವೇ ಮೂಲ. ಮೇಲಿನ ಗ್ರಂಥಗಳ ಆಧಾರದ ಮೇಲೆ ನಾಗಚಂದ್ರನು ತನ್ನ ಗ್ರಂಥವನ್ನು ರಚಿಸಿದ್ದರೂ ಅದು ಅವುಗಳ ಅನುವಾದಮಾತ್ರವಲ್ಲ. ನಾಗಚಂದ್ರನ ದೃಷ್ಟಿಯಲ್ಲಿ ತನ್ನ ಕೃತಿಯು ಪುರಾಣವೂ ಅಹುದು; ರಾಮಕಥಾವಿಷಯಕವಾದ ಕಾವ್ಯವೂ ಅಹುದು. ಅದಕ್ಕಾಗಿ ಅವನ ಎರಡು ಆಕರಗಳಿಂದಲೂ ವಿಶೇಷ ಮಾರ್ಪಾಟು ಮಾಡಿಕೊಂಡಿದ್ದಾನೆ. ಮೊದಲು ಅವನು ಉತ್ತಮ ಸಂಗ್ರಹಕಾರ. ಅವನ ಕಾವ್ಯವು ಸಹೃದಯರ ಮೆಚ್ಚಿಗೆಯನ್ನು ಪಡೆಯಬೇಕು. ಈ ದೃಷ್ಟಿಯಿಂದ ಅವನು ಮೂಲದಲ್ಲಿರುವ ಕಥೆಗೆ ನೇರವಾಗಿ ಸಂಬಂಧ ಪಡದಿರುವ ರಾಜವಂಶಾವಳಿಗಳನ್ನೂ ಧರ್ಮೋಪದೇಶಗಳನ್ನೂ ಬಿಟ್ಟಿದ್ದಾನೆ. ಇದರಿಂದ ಅವನ ಕಾವ್ಯವು ಆಕಾರದಲ್ಲಿ ಮೂಲದ ಹತ್ತನೆಯ ಒಂದರಷ್ಟಾಗಿದೆ. ಕೆಲವಂಶಗಳನ್ನು ಸ್ಥಾನಪಲ್ಲಟಮಾಡಿದ್ದಾನೆ. ಮೂಲವು ರಾವಣ ದಿಗ್ವಿಜಯದಿಂದ ಪ್ರಾರಂಭವಾಗುತ್ತದೆ. ನಾಗಚಂದ್ರನು ತನ್ನ ಕಾವ್ಯವನ್ನು ರಾಮಕಥೆಯಿಂದಲೇ ಪ್ರಾರಂಭಿಸುತ್ತಾನೆ. ಈ ಪಲ್ಲಟದಿಂದ ಕಥೆಯ ಅನುಸ್ಯೂತವಾದ ಬೆಳವಣಿಗೆಗೆ ಕುಂದುಂಟಾಗದೆ ಇಲ್ಲ. ವಿಮಲಸೂರಿಯ ರಾವಣನ ಉದಾತ್ತತೆಯನ್ನು ನಾಗಚಂದ್ರನಲ್ಲಿ ಕಾಣಲಾಗುವುದಿಲ್ಲ. ಅವನ ಕೆಲವು ದೋಷಗಳೂ ಇಲ್ಲಿ ಪ್ರದರ್ಶಿತವಾಗಿವೆ. ಆದುದರಿಂದ ರಾವಣನ ದುರಂತತೆಯ ತೀಕ್ಷ್ಣತೆಯನ್ನು ಇಲ್ಲಿ ಕಾಣಲಾಗುವುದಿಲ್ಲ. ಕೆಲವು ಅವಶ್ಯಕವಾದ ಸನ್ನಿವೇಶಗಳು ಬಿಟ್ಟುಹೋಗಿವೆ. ರಾವಣನ ಅಂತ್ಯಕಾಲದ ಮನಸ್ಸಿನ ಆಂದೋಲನ ಅವಶ್ಯವಾಗಿ ಇರಬೇಕಾದುದು ಇಲ್ಲಿ ಇಲ್ಲವಾಗಿದೆ. ಮೂಲದಲ್ಲಿಲ್ಲದ ಕೆಲವು ವಿಷಯಗಳನ್ನು ಇಲ್ಲಿ ಸೇರಿಸಿರುವುದರಿಂದ ಕೆಲವೆಡೆಗಳಲ್ಲಿ 'ಪಂಪರಾಮಾಯಣ'ವು ಆಕರ್ಷಕವಾಗಿಯೂ ಕಾಣುತ್ತದೆ. ಸೀತಾಪಹರಣ ಸಂದರ್ಭದಲ್ಲಿ ರಾವಣನಿಗೂ ಅವಲೋಕಿನೀ ವಿದ್ಯೆಗೂ ನಡೆಯುವ ಸಂಭಾಷಣೆ ಆಕರ್ಷಕವಾಗಿದೆ. ಹಾಗೆಯೇ ರವಿಷೇಣನ ವಿಸ್ತಾರವಾದ ವರ್ಣನೆಗಳನ್ನು ಸಂಗ್ರಹಿಸಿ ಉಪಯೋಗಿಸಿಕೊಂಡಿರುವುದು ಮನೋಜ್ಞವಾಗಿದೆ.

ನಾಗಚಂದ್ರನು ತನ್ನ ಗ್ರಂಥವನ್ನು ಪೀಠಿಕಾ ಪ್ರಕರಣ, ದಶರಥ ವಂಶವರ್ಣನೆ, ಕುಮಾರೋದಯ, ಜನಕಜಿನಭವನ ದರ್ಶನ, ಸೀತಾ ಸ್ವಯಂವರ, ವನಪ್ರವೇಶ, ಶರದ್ವರ್ಣನೆ, ಚಾರಣಯುಗಳದರ್ಶನ, ಸೀತಾಪಹರಣ, ದಶವದನ ವಂಶವರ್ಣನ ಲಂಕಾದಹನ, ಲಂಕಾ ದಿಗ್ವಿಜಯ ಪ್ರಯಾಣ, ಬಲಾಚ್ಯುತರ ಪುಣ್ಯಪ್ರಭಾವೋದಯ ವರ್ಣನೆ, ರಘುವೀರವಿಜಯ, ಸೀತಾಪರಿತ್ಯಾಗ, ಪರಿನಿರ್ವಾಣಕಲ್ಯಾಣ ಎಂಬ ಹದಿನಾರು ಆಶ್ವಾಸಗಳಲ್ಲಿ ರಚಿಸಿದ್ದಾನೆ.

ಜೈನ ಸಂಪ್ರದಾಯಕ್ಕನುಗುಣವಾಗಿ ರಚಿತವಾಗಿರುವ ಪಂಪರಾಮಾಯಣದ ಕಥೆಗೂ ವಾಲ್ಮೀಕಿಯ ಕಥೆಗೂ ವಿಶೇಷ ವ್ಯತ್ಯಾಸವಿದೆ. 'ಪಂಪರಾಮಾಯಣ'ದ ಪ್ರಾರಂಭದಲ್ಲಿ ಜಾನಕಿಯ ನಿಮಿತ್ತವಾಗಿ ದಾಶರಥಿಯ ಕಯ್ಯಲ್ಲಿ ರಾವಣನು ಹತನಾಗುತ್ತಾನೆ ಎಂಬ ವಿಷಯವನ್ನು ವಿಭೀಷಣನು ಜ್ಯೋತಿಷ್ಕರಿಂದ ತಿಳಿದು ಅವಕ್ಕೆ ಅವಕಾಶವಿಲ್ಲದಂತೆ ಅವನು ಜನಕ ದಶರಥರನ್ನೇ ಸಂಹಾರ ಮಾಡುವುದಕ್ಕೆ ದಂಡೆತ್ತಿ ಬರುವನೆಂಬಂಶವನ್ನು ನಾರದನು ದಶರಥನಿಗೆ ತಿಳಿಸುತ್ತಾನೆ. ದಶರಥನು ಈ ವಿಷಯವನ್ನು ಜನಕನಿಗೂ ತಿಳಿಸಿ ತಮ್ಮ ಆಕಾರದ ಲೆಪ್ಪದ ಬೊಂಬೆಗಳನ್ನು ನಿರ್ಮಿಸಿಟ್ಟು ಆ ಮೂಲಕ ತಮಗೆ ವಿಭೀಷಣನಿಂದ ಬಂದ ವಿಪತ್ತನ್ನು ತಪ್ಪಿಸಿಕೊಳ್ಳುವರು. ಈ ಅಂಶ ವಾಲ್ಮೀಕಿಯಲ್ಲಿಲ್ಲ.

ಪಂಪರಾಮಾಯಣದಲ್ಲಿ ದಶರಥನಿಗೆ ಮೊದಲು ಅಪರಾಜಿತೆ, ಸುಮಿತ್ರೆ ಮತ್ತು ಸುಪ್ರಭೆ ಎಂಬ ಮೂವರು ಹೆಂಡತಿಯರಿದ್ದರೆಂದೂ ದಶರಥನು ಕೈಕೆಯನ್ನು ಸ್ವಯಂವರದಲ್ಲಿ ಗೆದ್ದನೆಂದೂ, ಆ ಕಾಲದಲ್ಲಿ ದಶರಥನಿಗೆ ಇತರ ರಾಜರುಗಳಿಂದ ಉಂಟಾದ ಪರಾಭವವನ್ನು ತಪ್ಪಿಸಲು ಕೈಕೆ ಸಹಾಯ ಮಾಡಿದುದರಿಂದ, ದಶರಥನು ಅವಳಿಗೆ

ವರವನ್ನು ಕೊಟ್ಟನೆಂದೂ ಉಕ್ತವಾಗಿದೆ. ಇವೇ ಅಲ್ಲದೆ ಮುಂದಿನ ಕೆಲವು ವ್ಯತ್ಯಾಸಗಳನ್ನು ಗುರುತಿಸಬಹುದು. 'ಪಂಪರಾಮಾಯಣ'ದಲ್ಲಿ ಪುತ್ರಕಾಮೇಷ್ಠಿ ಯಾಗದ ವಿಷಯವೇ ಇಲ್ಲ. ರಾಮನ ತಾಯಿ ಅಪರಾಜಿತೆ. ಲಕ್ಷ್ಮಣನೊಬ್ಬನೇ ಸುಮಿತ್ರೆಯ ಮಗ. ಶತ್ರುಘ್ನನ ತಾಯಿ ಸುಪ್ರಭೆ. ರಾಮಲಕ್ಷ್ಮಣರು ಬಲಾಚ್ಯುತರು. ಲಕ್ಷ್ಮಣನಿಗೆ ಎಂಟನೆಯ ಕೇಶವ, ಉಪೇಂದ್ರ, ವಾಸುದೇವ ಕೃಷ್ಣ, ನಾರಾಯಣ, ಲಕ್ಷ್ಮೀಧರ, ಪುರುಷೋತ್ತಮ, ಜನಾರ್ದನ – ಎಂಬ ಹೆಸರುಗಳೂ ಉಂಟು. ಇವನೇ ನಿಜವಾದ ಕಥಾನಾಯಕ. ರಾಮನ ವರ್ಣವು ಬಿಳುಪು, ಲಕ್ಷ್ಮಣನದು ಕಪ್ಪು. ವಿಶ್ವಾಮಿತ್ರನ ಪ್ರಸ್ತಾಪವೇ ಇಲ್ಲ. ಸೀತಾದೇವಿಯನ್ನು ನಾರದನು ಮೋಹಿಸಿದನೆಂದಿದೆ. ಸೀತಾದೇವಿಗೆ ಪ್ರಭಾಮಂಡಲನೆಂಬ ಅಣ್ಣನಿದ್ದನೆಂದೂ ಆವನು ಖಚರಪತಿಯಾದ ಇಂದುಗತಿಯ ಸಾಕು ಮಗನೆಂದೂ, ಅವನು ನಾರದನು ಬರೆದಿಟ್ಟಿದ್ದ ಸೀತೆಯ ಪಟವನ್ನು ನೋಡಿ ತಿಳಿಯದೇ ಮೋಹಿಸಿ, ಕಡೆಗೆ ನಿಶ್ಚಯಾಂಶವನ್ನು ತಿಳಿದು ವ್ಯಸನ ಪಟ್ಟನೆಂದೂ ಹೇಳಿದೆ. ಖಚರಪತಿಯಾದ ಇಂದುಗತಿಯ ಬಳಿಯಲ್ಲಿದ್ದ ವಜ್ರಾವರ್ತ ಮತ್ತು ಸಾಗರಾವರ್ತಗಳೆಂಬ ಧನುಸ್ಸುಗಳನ್ನು ಆತನು ಜನಕನೊಡನೆ ಮಿಥಿಲೆಗೆ ಕಳುಹಿಸಿದನೆಂದೂ, ಅವುಗಳಲ್ಲಿ ಮೊದಲನೆಯದನ್ನು ರಾಮನು ಬಗ್ಗಿಸಿ ಸೀತೆಯನ್ನೂ ಎರಡನೆಯದನ್ನು ಲಕ್ಷ್ಮಣನು ಬಗ್ಗಿಸಿ ಚಂದ್ರಧ್ವಜನ ಇಬ್ಬರು ಮಕ್ಕಳನ್ನು ಪಡೆದನೆಂದೂ ಹೇಳಿದೆ. ಭರತನು ರಾಮಲಕ್ಷ್ಮಣರಿಗುಂಟಾದ ವೈಭವದಿಂದ ವಿಷಾದಪಟ್ಟು ವೈರಾಗ್ಯಪರನಾದನೆಂದೂ ಕೈಕೆಯ ಸಲಹೆಯ ಮೇರೆಗೆ ಅವನಿಗೆ ಜನಕನ ತಮ್ಮನಾದ ಕನಕನ ಮಗಳನ್ನು ಮದುವೆ ಮಾಡಿದಂತೆಯೂ ಹೇಳಿದೆ. ವಿಜಯ ಯಾತ್ರೆಯಲ್ಲಿ ಲಕ್ಷ್ಮಣನಿಗೆ ಅನೇಕ ಮದುವೆಗಳಾಗುತ್ತವೆ. ವಾಲ್ಮೀಕಿಯು ಹೇಳಿರುವಂತೆ ಏಕಪತ್ನಿಯುಳ್ಳ ರಾಮನಿಗೆ ಸುಗ್ರೀವನ ಮಕ್ಕಳನ್ನೂ ರಥಿಮುಖನಗರಿಯ ಮಕ್ಕಳನ್ನೂ, ರತ್ನಪುರದರಸನ ಮಗಳನ್ನೂ ಕೊಟ್ಟು ಮದುವೆಯಾದಂತೆ ಹೇಳಿದೆ. ಮಾರೀಚನು ಮಾಯಾಮೃಗವಾಗಿ ರಾಮನ ಧ್ವನಿಯನ್ನನುಕರಿಸಿ ಆರ್ತನಾದ ಮಾಡಿದನೆಂಬುದಕ್ಕೆ ಬದಲಾಗಿ ರಾವಣನ ವಶವಾದ ಅವಲೋಕಿನೀ ವಿದ್ಯೆಯು ಲಕ್ಷ್ಮಣನ ಧ್ವನಿಯಂತೆ ಸಿಂಹನಾದ ಮಾಡಿದ ಹಾಗೆ ಹೇಳಿದೆ. ಸುಗ್ರೀವನೊದಲಾದವರು ಕಪಿಧ್ವಜರೆಂದೂ ಖೇಚರರೆಂದೂ ಹೇಳಿದೆ. ಸುಗ್ರೀವನ ತಂಗಿಯಾದ ಶ್ರೀಪ್ರಭೆಯನ್ನು ರಾವಣನು ಮದುವೆಯಾಗಿದ್ದನೆಂದಿದೆ. ವಾಲಿಯು ಕೈಲಾಸ ಪರ್ವತದಲ್ಲಿ ತಪಸ್ಸು ಮಾಡುತ್ತಿರುವಾಗ ಆ ಪರ್ವತವನ್ನು ರಾವಣನು ಎತ್ತಲು ವಾಲಿಯು ತನ್ನ ಹೆಬ್ಬೆರಳಿನಿಂದ ತುಳಿದನೆಂದೂ, ಆಗ ರಾವಣನು ಗಟ್ಟಿಯಾಗಿ ಕೂಗಿಕೊಂಡುದರಿಂದ ರಾವಣನಿಗೆ ಆ ಹೆಸರು ಬಂದಿತೆಂದೂ ಹೇಳಿದೆ. ಕಾರ್ತವೀರ್ಯಾರ್ಜುನನಿಗೆ ಸಹಸ್ರಬಾಹು ಎಂಬ ಹೆಸರಿದೆ. ರಾವಣನನ್ನು ಸಹಸ್ರಬಾಹು ಸೆರೆ ಹಿಡಿದನೆಂಬುದಕ್ಕೆ ಬದಲಾಗಿ ರಾವಣನೇ ಅವನನ್ನು ಸೆರೆಹಿಡಿದನೆಂದಿದೆ. ರಾವಣನ ತಂಗಿಯಾದ ಚಂದ್ರನಖಿಯ ಮಗಳು ಅನಂಗ ಪುಷ್ಪೆಯನ್ನು ಹನುಮಂತನು ಮದುವೆಯಾಗಿ ರಾವಣನು ಕೊಟ್ಟ ಕರ್ಣಕುಂಡಲಪುರಕ್ಕೆ ದೊರೆಯಾಗಿ ಅವನ ಸ್ನೇಹಿತನಾಗಿದ್ದನೆಂದೂ, ರಾವಣನು ಸೀತೆಯನ್ನು ಅಪಹರಿಸಿದುದಕ್ಕಾಗಿ ಅವನಿಗೆ ಹಗೆಯಾಗಿ ರಾಮನಿಗೆ ಸಹಾಯ ಮಾಡಿದನೆಂದೂ ಹೇಳಿದೆ. ರಾವಣನನ್ನು ಸಂಹರಿಸಿದವನು ಲಕ್ಷ್ಮಣನು. ಅದರ ಫಲವಾಗಿ ಆತನು ನರಕಪ್ರವೇಶ ಮಾಡಬೇಕಾಗುತ್ತದೆ. ಅಲ್ಲಿಂದ ಅವನನ್ನು ಉದ್ಧಾರಮಾಡಿದವಳು ಸೀತೆಯೇ. ಇಲ್ಲಿ ಬರುವ ಪಾತ್ರಗಳಲ್ಲಿ ಅನೇಕರು ಕೊನೆಯಲ್ಲಿ ವೈರಾಗ್ಯವನ್ನು ತಾಳಿ ವೀರತಪಸ್ಸಿನಿಂದ ಮೋಕ್ಷವನ್ನು ಪಡೆಯುವರು.

'ಪಂಪರಾಮಾಯಣ'ವು ಒಂದು ಚಂಪೂ ಗ್ರಂಥ. ಇಲ್ಲಿಯ ಕಂದ ವೃತ್ತಗಳು ಸರಳಗತಿಯುಳ್ಳವು. ಕವಿಗೆ ಅರ್ಥಾಂತರನ್ಯಾಸಾಲಂಕಾರದಲ್ಲಿ ವಿಶೇಷ ಆಸಕ್ತಿ. ಕನ್ನಡ ಸಾಹಿತ್ಯದಲ್ಲಿ 'ಪಂಪರಾಮಾಯಣ'ಕ್ಕೆ ಪ್ರಥಮಸ್ಥಾನವಿಲ್ಲದಿದ್ದರೂ ಅದು ಗಣನೀಯ ಗ್ರಂಥವಾಗಿದೆ.

ನಾಗಚಂದ್ರನನ್ನನುಸರಿಸಿ ಕುಮುದೇಂದುವು ಕ್ರಿ. ಶ. ೧೨೭೫ ರಲ್ಲಿ ತನ್ನ ರಾಮಾಯಣವನ್ನು ಕುಸುಮ ಷಟ್ಪದಿ ಮತ್ತು ರಗಳೆಗಳಲ್ಲಿ ರಚಿಸಿದ್ದಾನೆ. ಕವಿಮಿತ್ರ ದೇವಪ್ಪನು ಕ್ರಿ. ಶ. ೧೫೨೫ ರಲ್ಲಿ ತನ್ನ 'ರಾಮವಿಜಯ ಕಾವ್ಯ'ವನ್ನು ಸಾಂಗತ್ಯದಲ್ಲಿ ರಚಿಸಿದ್ದಾನೆ. ಸುಮಾರು ೧೭೦೦ ರಲ್ಲಿ ಚಂದ್ರಶೇಖರ ಕವಿಯಿಂದ ರಚಿತವಾದ 'ರಾಮಚಂದ್ರ ಚರಿತ್ರೆ'ಯೂ, ದೇವೇಂದ್ರ ಕವಿಯಿಂದ ೧೭೯೨ ರಲ್ಲಿ ರಚಿತವಾದ 'ರಾಮಕಥಾವತಾರ'ವೂ, ೧೮೧೦ ರಲ್ಲಿ ಚಂದ್ರಸಾಗರವರ್ಣಿಯಿಂದ ರಚಿತವಾದ 'ಜಿನ ರಾಮಾಯಣ'ವೂ ಜೈನ ಸಂಪ್ರದಾಯದ ರಾಮಾಯಣಗಳು.

ಕನ್ನಡ ದೇಶದಲ್ಲಿ ದಾಸಕೂಟ ಪ್ರಾರಂಭವಾಗಿ ಹರಿದಾಸರ ಭಕ್ತಿ ಪಂಥವು ಬೇರೂರುವವರೆಗೆ ವೈದಿಕ ಪಂಥದ ರಾಮಾಯಣವಾವುದೂ ರಚಿತವಾಗಿರುವಂತೆ ಕಾಣುವುದಿಲ್ಲ. ಹರಿದಾಸರ ಕೀರ್ತನೆಗಳ ಮೂಲಕ ವಾಲ್ಮೀಕಿ ರಾಮಾಯಣದ ಕಥೆಯನ್ನು ಕೇಳಿದ ವೈಷ್ಣವ ಪಂಥೀಯರಿಗೆ ಈ ಜೈನ ರಾಮಾಯಣಗಳು ಯಾವ ಪ್ರಭಾವವನ್ನೂ ಬೀರಿದ ಹಾಗೆ ಕಾಣುವುದಿಲ್ಲ. ಭಾರತದಂತೆಯೇ ವೈದಿಕ ಪಂಥದ ರಾಮಾಯಣದ ರಚನೆಯೂ ವಿಶೇಷ ಆಗತ್ಯವೆಂದು ತೋರಿರಬೇಕು. ಆದರೂ ಸುಮಾರು ೧೬ನೆಯ ಶತಮಾನದ ಉತ್ತರಾರ್ಧದವರೆಗೆ ಯಾವ ವೈದಿಕ ಪಂಥದ ರಾಮಾಯಣವೂ ರಚಿತವಾಗಲಿಲ್ಲ. ಕನ್ನಡದಲ್ಲಿ ಅಂತಹ ಪ್ರಥಮ

(33ನೇ ಪುಟ ನೋಡಿ)

# ಶ್ರೀರಾಮಪಟ್ಟಾಭಿಷೇಕ

ಶ್ರೀರಾಮನು ಲಂಕಾಪಟ್ಟಣದಲ್ಲಿ ತಾನು ಕೈಗೊಂಡ ಕಾರ್ಯಗಳನ್ನೆಲ್ಲ ಯಶಸ್ವಿಗೊಳಿಸಿ ನಂತರ ಭರತನಿಗೆ ತಾನು ಚಿತ್ರಕೂಟದಲ್ಲಿ ತಿಳಿಸಿದ್ದ ಕಾಲಾವಧಿಯು ಮುಗಿಯುತ್ತ ಬಂದಿತ್ತಾದ್ದರಿಂದ ತಡಮಾಡದೆ, ಅಯೋಧ್ಯೆಗೆ ಹಿಂತಿರುಗ ಬೇಕೆಂದು ನಿಶ್ಚಯಿಸಿ, ಪುಷ್ಪಕವಿಮಾನವನ್ನು ಸಿದ್ಧಪಡಿಸುವಂತೆ ವಿಭೀಷಣನಿಗೆ ಹೇಳಿದನು. ಲಂಕಾಪಟ್ಟಣದಲ್ಲಿದ್ದ ವಿಮಾನವು ಶ್ರೀರಾಮನಿದ್ದ ಸ್ಥಳಕ್ಕೆ ಬಂದಿತು.

ಪುಷ್ಪಕವಿಮಾನವು ಮಯನಿಂದ ನಿರ್ಮಿತವಾದುದು. ಅತಿ ಸೌಂದರ್ಯಯುತವಾದುದು. ಅದರ ಎಲ್ಲ ಭಾಗವೂ ಚಿತ್ರವಿಚಿತ್ರವಾದ ಚಿನ್ನದ ಅಲಂಕಾರದಿಂದ ಕೂಡಿತ್ತು. ವಿಮಾನದ ಮಧ್ಯೆ ವೈಡೂರ್ಯದಿಂದ ಕೆತ್ತಲ್ಪಟ್ಟ ವೇದಿಕೆ ಇದ್ದಿತು. ಸುತ್ತಲೂ ರತ್ನದ ಮಂಡಪಗಳು, ಅವುಗಳಲ್ಲಿ ಚಿನ್ನದ ಕೊಠಡಿಗಳು. ಸುತ್ತಲೂ ತೂಗಾಡುವ ಬಂಗಾರದ ಕಮಲಗಳು, ಮೇಲೆ ಹಾರಾಡುವ ಧ್ವಜಗಳು, ಮುತ್ತಿನ ಕಿಟಕಿಗಳು, ಮೂಲೆ ಮೂಲೆಗಳಲ್ಲಿ ಗಣಗಣ ಸದ್ದುಮಾಡುವ ಗಂಟೆಗಳು. ವಿಮಾನವು ಮೇರು ಶಿಖರದಂತೆ ಹೊಳೆಯುತ್ತಿತ್ತು. ಅದರ ಉಪ್ಪರಿಗೆಯ ಮೇಲೆ ದೇದೀಪ್ಯಮಾನವಾಗಿ ಹೊಳೆಯುವ ಬೆಳ್ಳಿಯ ಹೊದಿಕೆಯಿಂದ ಬೆಳಗುತ್ತಿತ್ತು. ವಿಮಾನಕ್ಕೆ ಮನೋವೇಗದ ಗತಿಯಿದ್ದಿತು. ಯಜಮಾನನು ಇಷ್ಟಪಟ್ಟಷ್ಟು ಜನರನ್ನು ಕೂರಿಸಿಕೊಂಡು ಹೋಗುವಷ್ಟು ಶಕ್ತಿಯೂ, ವಿಸ್ತಾರವೂ ಅದಕ್ಕಿದ್ದಿತು.

ಶ್ರೀರಾಮನು ಸೀತಾಲಕ್ಷ್ಮಣರೊಡನೆ ವಿಮಾನದಲ್ಲಿ ಕುಳಿತನು. ಅನಂತರ ಸುಗ್ರೀವಾದಿ ವಾನರವೀರರೂ, ವಿಭೀಷಣನೂ ಕುಳಿತರು. ವಿಮಾನವು ಲಂಕೆಯಿಂದ ಹೊರಟು ಕಿಷ್ಕಿಂಧಾಪಟ್ಟಣದ ಹತ್ತಿರಕ್ಕೆ ಬಂದಿತು. ಆಗ ಸೀತಾದೇವಿಯು ವಾನರ ಸ್ತ್ರೀಯರೂ ಅಯೋಧ್ಯೆಗೆ ಬರಬೇಕೆಂಬ ತನ್ನ ಇಷ್ಟವನ್ನು ಸೂಚಿಸಿದಳು. ಆದೇಪ್ರಕಾರ ವಾನರ ಸ್ತ್ರೀಯರೆಲ್ಲರೂ ಮನುಷ್ಯಾಕಾರವನ್ನು ಧರಿಸಿ, ಅಲಂಕರಿಸಿಕೊಂಡು, ತಮ್ಮ ತಮ್ಮ ಪತಿಗಳ ಸಮೇತ ವಿಮಾನದಲ್ಲಿ ಬಂದು ಸೇರಿದರು. ಅಲ್ಲಿಂದ ಮುಂದೆ ವಿಮಾನವು ಭರದ್ವಾಜಾಶ್ರಮಕ್ಕೆ ಬಂದಿತು. ಮುನಿಗಳು ಶ್ರೀರಾಮನನ್ನು ಬಹು ಆದರದಿಂದ ಸ್ವಾಗತಿಸಿ, ಆಶ್ರಮದಲ್ಲಿ ಒಂದು ದಿನ ಇದ್ದುಹೋಗುವಂತೆ ತಿಳಿಸಿದರು.

ತಪೋಧನರಾದ ಭರದ್ವಾಜಋಷಿಗಳಿಗೆ ಶ್ರೀರಾಮನು ನಮಸ್ಕಾರಮಾಡಿ 'ಮಹಾತ್ಮರೇ! ಅಯೋಧ್ಯೆಯಲ್ಲಿ ಎಲ್ಲವೂ ಸುಭಿಕ್ಷವಾಗಿರುವುದೇ? ಪ್ರಜೆಗಳು ಕ್ಷೇಮದಿಂದಿರುವರೇ? ನಮ್ಮ ಮಾತೆಯರು ಆರೋಗ್ಯದಿಂದ ಇರುವರೇ? ಭರತನ ರಾಜ್ಯಭಾರ ಹೇಗಿರುವುದು?' ಎಂದು ಕೇಳಿದನು. ಭರದ್ವಾಜರು ಮಂದಹಾಸಯುಕ್ತರಾಗಿ "ಶ್ರೀರಾಮಾ! ಅಯೋಧ್ಯೆಯಲ್ಲಿ ಎಲ್ಲರೂ ಕ್ಷೇಮದಿಂದ ಇರುವರು. ಭರತನು ನಿನ್ನ ಪಾದುಕೆಗಳಿಗೆ ಪೂಜೆಮಾಡಿ ನಿತ್ಯವೂ ಅದರ ಮುಂದೆ ಕೈಮುಗಿದು ನಿಂತು ಅದರ ಅಪ್ಪಣೆ ಪಡೆದು ರಾಜ್ಯಭಾರ ನಡೆಸುತ್ತಿರುವನು. ನಾರುಮಡಿ ಉಟ್ಟಿದ್ದಾನೆ. ಸ್ನಾನಮಾಡಿಲ್ಲ. ತಲೆಬಾಚಿಲ್ಲ. ನಿತ್ಯವೂ ನಿನ್ನದೇ ಧ್ಯಾನ. ನೀನು ಯಾವಾಗ ಬರುವೆಯೋ ಎಂಬ ಕಾತರ. ನಾನು ನಿನ್ನ ವಿಚಾರವನ್ನೆಲ್ಲ ತಿಳಿದಿರುವೆನು. ದೇವೇಂದ್ರನ ವರದಿಂದ, ನೀನು ಸತ್ತ ವಾನರರೆಲ್ಲರನ್ನೂ ಬದುಕಿಸಿದೆ. ನೀನು ಬೇಕಾದ ವರಗಳನ್ನು ಕೇಳು ಕೊಡುವೆನು" ಎಂದರು ಮುನಿಗಳು.

"ಮಹಾತ್ಮರೇ! ನಾನು ಈ ವಾನರ ಸಮೂಹದೊಡನೆ ಅಯೋಧ್ಯೆಗೆ ಹೋಗುವವನಿದ್ದೇನೆ. ದಾರಿಯುದ್ದಕ್ಕೂ ಗಿಡಮರಲತೆಗಳೆಲ್ಲ ಮಕರಂದವನ್ನು ಸುರಿಸುತ್ತಿರಲಿ. ಹಣ್ಣುಗಳು ಅಮೃತದಂತೆ ಶುಚಿರುಚಿಯಾಗಿರಲಿ. ವಾನರರು ಅವೆಲ್ಲವನ್ನೂ ತಿಂದು ಸಂತೋಷದಿಂದಿರುವಂತೆ ತಾವು ಅನುಗ್ರಹಿಸಬೇಕು" ಎಂದನು. ಮುನಿಗಳು ತಥಾಸ್ತು ಎಂದರು. ಸಮಸ್ತ ಗಿಡಮರಲತೆಗಳು ಹೂವು ಹಣ್ಣುಗಳಿಂದ ಸಂಪದ್ಭರಿತವಾದುವು. ಅನಂತರ ಶ್ರೀರಾಮನು ಹನುಮಂತನ ಕಡೆಗೆ ತಿರುಗಿ 'ತಾವುಗಳೆಲ್ಲ ಮುನಿಗಳ ಆಶ್ರಮದಲ್ಲಿ ಈ ರಾತ್ರಿ ತಂಗಿದ್ದು ಮಾರನೆಯ ಬೆಳಗ್ಗೆ ಬರುವುದಾಗಿ ಭರತನಿಗೆ ತಿಳಿಸುವಂತೆ' ಅಪ್ಪಣೆ ಮಾಡಿದನು.

ಹನುಮಂತನು ವಾಯುವೇಗದಿಂದ ನಂದಿಗ್ರಾಮಕ್ಕೆ ಬಂದು ಭರತನಿಗೆ ಶ್ರೀರಾಮವೃತ್ತಾಂತವನ್ನು ತಿಳಿಸಿದನು. ಭರತನ ಸಂತೋಷಕ್ಕೆ ಮಿತಿಯೇ ಇಲ್ಲ, "ಎಂತಹ ಸಂತೋಷದ ಸಮಾಚಾರ ಕೇಳಿದೆನಲ್ಲಾ! ನನ್ನ ಅಣ್ಣ ರಾಮಪ್ರಭು ಬರುತ್ತಿದ್ದಾನೆ. ಘೋರ ಅರಣ್ಯಕ್ಕೆ ಹೋಗಿ

ಶ್ರೀ ಡಿ. ಕೃಷ್ಣಅಯ್ಯಂಗಾರ್



ರಾಮ, ಭರತ, ಲಕ್ಷ್ಮಣ, ಶತ್ರುಘ್ನರು ತಮ್ಮ ತಾಯಂದಿರೊಂದಿಗೆ

ಎಷ್ಟುವರ್ಷವಾಯಿತು. ಇದುವರೆವಿಗೆ ಅವನ ಸುಳಿವೇ ಇರಲಿಲ್ಲ, ಈಗ ತಿಳಿಯಿತು. ನನ್ನಂತಹ ಭಾಗ್ಯಶಾಲಿ ಇನ್ಯಾರಿದ್ದಾರೆ? ನೂರುವರ್ಷ ಬದುಕಬೇಕು. ಹಾಗೆ ಬದುಕಿದ್ದರೆ, ಎಂದಾದರೂ ಹರ್ಷದ ಸುದ್ದಿ ತಿಳಿಯಬಹುದು ಎಂಬ ನಾಣ್ನುಡಿ ಸತ್ಯ. ಹನುಮಂತಾ! ವೀರಾಗ್ರಣಿ! ಈ ದರ್ಭಾಸನದಲ್ಲಿ ಕುಳಿತುಕೋ? ಚಿತ್ರಕೂಟದಿಂದ ನಾನು ಬಂದಮೇಲೆ ಏನಾಯಿತು ಎಂಬುದನ್ನು ತಿಳಿಸು" ಎಂದು ಭರತನು ಕೇಳಿದನು.

'ಭರತಕುಮಾರಾ! ನೀನು ಚಿತ್ರಕೂಟದಿಂದ ಶ್ರೀರಾಮ ಪಾದುಕೆಗಳನ್ನು ತೆಗೆದುಕೊಂಡು ಹಿಂತಿರುಗಿದ ಮೇಲೆ ಬಹಳಷ್ಟು ವರುಷಗಳು ಸಂದಿವೆ. ಈ ನಡುವೆ ಬಹಳಷ್ಟು ಘಟನೆಗಳೂ ನಡೆದಿವೆ'ಯೆಂದು ಎಲ್ಲವನ್ನೂ ಹನುಮನು ವಿವರಿಸಿದನು. 'ವಿಭೀಷಣನಿಗೆ ಅಣ್ಣನ ರಾಜ್ಯವನ್ನು ನೀಡಿದ ನಂತರ ರಾಮಚಂದ್ರನು ನಿನಗೆ ಕೊಟ್ಟ ಮಾತಿನಂತೆ ಹಿಂದಿರುಗುತ್ತಿದ್ದಾನೆ. ವಿಭೀಷಣನು ಸಿದ್ಧಪಡಿಸಿರುವ ಪುಷ್ಪಕವಿಮಾನದಲ್ಲಿ ಸುಗ್ರೀವಾದಿ ವಾನರಸೈನ್ಯದೊಡನೆ ಬರುತ್ತಿರುವ ಶ್ರೀರಾಮನು ಇಂದು ಭರದ್ವಾಜಮುನಿಗಳ ಆಶ್ರಮದಲ್ಲಿ ತಂಗಿದ್ದು ನಾಳೆ ಇಲ್ಲಿಗೆ ಬರುವವನಾಗಿದ್ದಾನೆ' ಎಂದು ಹನುಮಂತನು ಭರತನಿಗೆ ತಿಳಿಸಿದನು.

ಭರತನು ಮೇಲ್ಕಂಡ ವಿಷಯಗಳನ್ನು ಕೇಳಿ ಆನಂದಭರಿತನಾಗಿ ಶತ್ರುಘ್ನನನ್ನು ಕುರಿತು "ಸೋದರಾ, ನಂದಿಗ್ರಾಮದಿಂದ ಅಯೋಧ್ಯೆಯವರೆಗೆ, ದಾರಿಯನ್ನು ಸುಗಮಗೊಳಿಸು ತಳಿರು ತೋರಣಗಳಿಂದ ರಸ್ತೆಯು ಅಲಂಕೃತವಾಗಲಿ, ಅಯೋಧ್ಯೆಯ ಬೀದಿಗಳೂ, ಭವನಗಳೂ ವೈಭವಯುತವಾಗಿ ಅಲಂಕೃತವಾಗಲಿ. ರಾಮಪ್ರಭುವಿನ ಆಗಮನವನ್ನು ಸರ್ವರೂ ಸ್ವಾಗತಿಸುವಂತೆ ಗುಂಪುಗುಂಪಾಗಿ ಜನರು ಬರಲಿ" ಎಂದು ಹೇಳಿದನು.

ಬೆಳಗಾಗುತ್ತಿರುವಾಗಲೇ ದಶರಥಮಹಾರಾಜನ ಭಾರ್ಯೆಯರು, ಮಂತ್ರಿಗಳು, ಪ್ರಜೆಗಳು ಶ್ರೀರಾಮನನ್ನು ಎದುರುಗೊಳ್ಳಲು ಸೇರಿದರು. ಅಷ್ಟಪ್ರಧಾನಿಗಳಾದ ದೃಷ್ಟ, ಜಯಂತ, ವಿಜಯ, ಸಿದ್ಧಾರ್ಥ, ಅರ್ಥಸಾಧನ, ಅಶೋಕ, ಮಂತ್ರಪಾಲ ಮತ್ತು ಸುಮಂತ್ರ, ಆನೆಗಳಮೇಲೆ ಕುಳಿತು ಹೊರಟರು. ಇಡೀ ಅಯೋಧ್ಯೆಯ ಜನಸ್ತೋಮ ನಂದಿಗ್ರಾಮದಲ್ಲಿ ನೆರೆದಿತ್ತು. ಜನರ ಕೋಲಾಹಲದ ಸದ್ದು, ಕುದುರೆಗೊರಸಿನ ಶಬ್ದ, ರಥದ ಗಾಲಿಗಳ ಸದ್ದು, ಎಲ್ಲವೂ, ಭೂಮಿಯು ಸಂತೋಷದಿಂದ ಕುಣಿಯುವ ಹಾಗೆ ಇದ್ದಿತು.

ಭರತನು ನಾರುಮಡಿಯುಟ್ಟು, ಕೃಷ್ಣಾಜಿನವನ್ನು ಹೊದ್ದು ಪಾದುಕೆಗಳನ್ನು ತಲೆಯಮೇಲಿಟ್ಟು, ಶ್ರೀರಾಮನನ್ನು ಎದುರುಗೊಳ್ಳಲು ಹೊರಟನು. ಹೂಮಾಲೆಗಳಿಂದ ಅಲಂಕೃತವಾದ ಪಾದುಕೆಗಳು, ಬಿಳಿಯ ಕೊಡೆ, ಚಿನ್ನದ ಚಾಮರ ಇವುಗಳಿಂದ ಕೂಡಿ, ಉಪವಾಸದಿಂದ ಸೊರಗಿದ ಮೈಯುಳ್ಳ ಭರತನು, ಮಂತ್ರಿಗಳು ವೈತಾಳಿಕರು, ವರ್ತಕರು, ಪ್ರಜೆಗಳು, ಹೀಗೆ ಎಲ್ಲರನ್ನೂ ಕೂಡಿ ರಾಮಪ್ರಭುವನ್ನು ಎದುರುಗೊಳ್ಳಲು ಸಿದ್ಧನಾದನು.

ಬೆಳಗಾಗಿ ಸ್ವಲ್ಪಹೊತ್ತಾಯಿತು. ರಾಮನು ಬರಲಿಲ್ಲ, ಯಾವಾಗಬಂದಾನೋ ಎಂಬ ಆತುರ ಎಲ್ಲರಿಗೂ. ಹನುಮಂತನನ್ನು ಕುರಿತು "ವಾಯುಪುತ್ರ! ಕಪಿಸ್ವಭಾವದ ಚಪಲಚಿತ್ತದಿಂದ ರಾಮನು ಬರುತ್ತಿದ್ದಾನೆ ಎಂದು ವಿನೋದಕ್ಕಾಗಿ ಹೇಳಿದೆಯೋ? ಹೇಗೆ!" ಎಂದು ಭರತನು ಕೇಳಿದನು.

"ರಾಜಕುಮಾರಾ! ಭರದ್ವಾಜಮುನಿಗಳ ಅನುಗ್ರಹದಿಂದ, ದಾರಿಯುದ್ದಕ್ಕೂ ಗಿಡಮರಗಳು ಹೂವುಹಣ್ಣುಗಳಿಂದ ಸಮೃದ್ಧವಾಗಿ ಮಕರಂದ ಸುರಿಸುತ್ತಿವೆ. ವಾನರರು ಅವುಗಳನ್ನು ತಿಂದು ಹರ್ಷದಿಂದ ಮುಂದುವರಿಯಲು ಸ್ವಲ್ಪನಿಧಾನವಾಗಿರಬಹುದು. ಅಗೋ? ಕೇಳು, ವಾನರರ ಕೋಲಾಹಲಧ್ವನಿ ಕೇಳಿಬರುತ್ತಿದೆ. ರಾಜಕುಮಾರಾ, ಅಲ್ಲಿ ನೋಡು; ಕೆಂಧೂಳು ಏಳುತ್ತಿದೆ. ವಾನರರ ಕಾಲಿನಿಂದ ಎದ್ದಧೂಳು ಹರಡುತ್ತಿದೆ. ಅಗೋ, ಆಕಾಶದಲ್ಲಿ ಪುಷ್ಪಕವಿಮಾನ ಬರುತ್ತಿದೆ. ವಿಮಾನದ ನಡುವೆ ವೈಡೂರ್ಯದ ಆಸನದಲ್ಲಿ ಸೀತಾರಾಮರು ಕುಳಿತಿದ್ದಾರೆ. ಅವರ ಮುಂದೆ ಮಹಾತೇಜೋವಂತರಾದ ವಿಭೀಷಣ ಮತ್ತು ಸುಗ್ರೀವಾದಿಗಳು ಕುಳಿತಿರುವರು" ಎಂದು ಹನುಮಂತನು ಹೇಳಿದನು.

ವಿಮಾನ ಇಳಿಯಿತು. ಮೊದಲು ಶ್ರೀರಾಮನ ಎದುರಿಗೆ ನಿಂತು "ಅಣ್ಣಾ! ಆಡಿದ ಮಾತಿಗೆ ತಪ್ಪದೆ ಸಕಾಲಕ್ಕೆ ಬಂದೆ. ನಿನಗೆ ಸ್ವಾಗತ. ಬಿಜಯಮಾಡು' ಎಂದೂ ಹೇಳಿ ರಾಮನಿಗೆ ನಮಸ್ಕಾರ ಮಾಡಿದನು. ಸೀತಾದೇವಿಗೂ ತನ್ನ ಹೆಸರು ಹೇಳಿ ನಮಸ್ಕಾರಮಾಡಿದನು.

ಸುಗ್ರೀವ, ಜಾಂಬವಂತ ಅಂಗದ, ಮೈಂದ ನೀಲ, ಋಷಭ ಗಂಧಮಾದನ, ಗಜ, ಗವಾಕ್ಷ, ನಳ ಇತ್ಯಾದಿ ವಾನರ ವೀರರೆಲ್ಲರೂ ಮನುಷ್ಯರೂಪದಲ್ಲಿದ್ದರು. ಭರತನು, ಸುಗ್ರೀವನನ್ನು ಕುರಿತು "ವಾನರೇಂದ್ರ, ನಾವು ನಾಲ್ವರು ಅಣ್ಣತಮ್ಮಂದಿರಿದ್ದೆವು ಈಗ ನೀನು ಐದನೆಯವನಾಗಿ ನಮ್ಮನ್ನು ಸೇರಿದ್ದು ಬಹಳ ಸಂತೋಷ" ಎಂದನು. ವಿಭೀಷಣನನ್ನು ಕುರಿತು 'ರಾಕ್ಷಸೇಂದ್ರಾ' ಮಿತ್ರಾ! ಶ್ರೀರಾಮನಿಗೆ ನಿನ್ನ ಸಹಾಯವು ದೊರೆತದ್ದು ನಮ್ಮಗಳ ಭಾಗ್ಯ' ಎಂದು ಭರತನು ಹೇಳಿದನು.

ಅಯೋಧ್ಯೆಯ ಪುರಜನರೆಲ್ಲರೂ ಶ್ರೀರಾಮನ ಮುಂದೆ ಕೈಮುಗಿದು ನಿಂತು "ಕೌಸಲ್ಯಾನಂದವರ್ಧನ, ಮಹಾಭಾಗಿ, ಸತ್ಯಧರ್ಮ ಪರಾಕ್ರಮ, ನಿನಗೆ ಸುಸ್ವಾಗತ" ಎಂದು ನಮಸ್ಕಾರ ಮಾಡಿದರು. ಧರ್ಮಜ್ಞನಾದ ಭರತನು ಪಾದುಕೆಗಳನ್ನು ಅಣ್ಣನ ಪಾದಗಳಿಗೆ ಜೋಡಿಸಿ, ಕೈಮುಗಿದು, 'ರಾಜೇಂದ್ರಾ! ನಿನ್ನ ರಾಜ್ಯವನ್ನು ತೆಗೆದುಕೋ. ಇಷ್ಟು ದಿವಸ ನ್ಯಾಸವಾಗಿ ನನ್ನಲ್ಲಿತ್ತು. ಇಷ್ಟು ದಿವಸ ಬಹಳ ಎಚ್ಚರದಿಂದ ನೋಡಿಕೊಂಡೆ. ಈಗ ನಿನ್ನದನ್ನು ನಿನಗೆ ಅರ್ಪಿಸುತ್ತಿದ್ದೇನೆ. ಇನ್ನು ನೀನು ಪಟ್ಟಾಭಿಷೇಕ ಮಾಡಿಕೋ. ನನ್ನ ಜನ್ಮ ಸಾರ್ಥಕವಾಯಿತು. ನನ್ನ ಬಯಕೆ ಕೈಗೂಡಿತು. ಹೇ! ಪ್ರಭೂ, ಇನ್ನು ನೀನು ನಿನ್ನ ಚದುರಂಗಬಲವನ್ನೂ, ನಗರವನ್ನೂ ವಹಿಸಿಕೋ. ನಿನ್ನ ಬೊಕ್ಕಸ ಮತ್ತು ಕಣಜ ನಿನ್ನ ಅನುಗ್ರಹದಿಂದ ಒಂದಕ್ಕೆ ಹತ್ತರಷ್ಟು ಆಗಿವೆ. ಅವನ್ನೂ ವಹಿಸಿಕೋ' ಎಂದು ವಿಜ್ಞಾಪಿಸಿದನು.

ಭರತನ ಬಂಧುಪ್ರೇಮವನ್ನೂ, ವಾತ್ಸಲ್ಯವನ್ನೂ ಸುಗ್ರೀವ ವಿಭೀಷಣಾದಿಯಾಗಿ ಎಲ್ಲರೂ ಕೊಂಡಾಡಿದರು. ಎಲ್ಲರೂ ವಿಮಾನದಿಂದ ಇಳಿದಮೇಲೆ ಶ್ರೀರಾಮನು 'ಹೇ! ವಿಮಾನವೇ! ನೀನು ನಿನ್ನ ಯಜಮಾನನಾದ ಕುಬೇರನನ್ನು ಹೋಗಿ ಸೇರು. ಅವನ ವಾಹನವಾಗಿರು. ಇದು ನನ್ನ ಅಪ್ಪಣೆ' ಎಂದನು. ಅದರಂತೆ ವಿಮಾನವು ಕುಬೇರನ ಬಳಿಗೆ ಹೊರಟುಹೋಯಿತು.

ಅನಂತರ ಸಹೋದರರೆಲ್ಲರೂ, ಕ್ಷೌರ, ಸ್ನಾನಾದಿಗಳನ್ನು ಮಾಡಿ ಶುಚಿರ್ಭೂತರಾಗಿ ನಂದಿ ಗ್ರಾಮದಿಂದ ಅಯೋಧ್ಯೆಗೆ ಹೊರಟರು. ದೇವೇಂದ್ರನಂತೆ, ರಥಾರೂಢನಾಗಿ ಹೋಗುತ್ತಿರುವಾಗ, ಭರತನು ಸಾರಥ್ಯಮಾಡಿದನು. ಶತ್ರುಘ್ನನು ಬಿಳಿಯಕೊಡೆ ಹಿಡಿದನು. ಲಕ್ಷ್ಮಣನು ಒಂದು ಕೈಯ್ಯಲ್ಲಿ ಬೀಸಣಿಗೆಯನ್ನೂ, ಇನ್ನೊಂದು ಕೈಯ್ಯಲ್ಲಿ ಚಾಮರವನ್ನು ಹಿಡಿದು ಉಪಚರಿಸುತ್ತಿದ್ದನು. ಇನ್ನೊಂದು ಪಕ್ಕದಿಂದ ವಿಭೀಷಣ ಚಾಮರ ಬೀಸುತ್ತಿದ್ದಾನೆ. ಇಂತಹ ವೈಭವಯುತವಾದ ಉತ್ಸವವನ್ನು ದೇವತೆಗಳೂ, ಮಹರ್ಷಿಗಳೂ, ಗಂಧರ್ವರೂ ಆಕಾಶದಲ್ಲಿ ನಿಂತು ನೋಡುತ್ತಿದ್ದರು.

ಅಯೋಧ್ಯೆಯ ಪ್ರಜೆಗಳಿಗೆ ಅಪರಿಮಿತ ಸಂತೋಷವಾಯಿತು. ಶಂಖ ಧ್ವನಿಯಾಯಿತು, ದುಂಧುಬಿಗಳು ಮೊಳಗಿದುವು. ಎಲ್ಲೆಲ್ಲೂ ಕೋಲಾಹಲ ಧ್ವನಿಯಾಯಿತು. ಹೀಗೆ ದೇದೀಪ್ಯಮಾನನಾಗಿ ಶ್ರೀರಾಮನು ಅಯೋಧ್ಯೆಗೆ ಬಂದನು. ಜೊತೆಯಲ್ಲಿ ಮಂತ್ರಿಗಳೂ, ಗುರುಹಿರಿಯರೂ ಪ್ರಜೆಗಳೂ ಎಲ್ಲರೂ ಇದ್ದರು. ಅಯೋಧ್ಯೆಯ ಉದ್ಯಾನದಲ್ಲಿದ್ದ ಶ್ರೀರಾಮನ ಅರಮನೆಯನ್ನು ಸುಗ್ರೀವನ ಬಿಡಾರವನ್ನಾಗಿ

(36ನೇ ಪುಟ ನೋಡಿ)

# ಶ್ರೀ ವಾದಿರಾಜರು

ಶ್ರೀಮನ್ನಾರಾಯಣನು ಪರಶುರಾಮನಾಗಿ ಅವತರಿಸಿ 21 ಸಲ ಕ್ಷತ್ರಿಯರನ್ನೆಲ್ಲಾ ಸಂಹರಿಸಿದ ತರುವಾಯು, ಒಂದು ಯಾಗವನ್ನು ಮಾಡಿ ಭೂಮಂಡಲವನ್ನೆಲ್ಲಾ ಬ್ರಾಹ್ಮಣರಿಗೆ ದಾನವಾಗಿ ಇತ್ತನು. ದಾನ ಕೊಟ್ಟ ಭೂಮಿಯಲ್ಲಿ ಪುನಃ ನೆಲಸುವುದು ಸರಿಯಲ್ಲವೆಂದು ತಿಳಿದು ಸಮುದ್ರಕ್ಕೆ ಬಾಣವನ್ನು ಎಸೆದು ಗೋಕರ್ಣದಿಂದ ಕನ್ಯಾಕುಮಾರಿಯವರೆಗೆ ಹೊಸಪ್ರದೇಶವನ್ನೇ ಸೃಷ್ಟಿಸಿದನು. ಪರಶುರಾಮ ಕ್ಷೇತ್ರವೆಂದು ಪ್ರಸಿದ್ಧಿ ಪಡೆದ ಈ ಕ್ಷೇತ್ರಕ್ಕೆ ರಾಮಭೋಜನೆಂಬುವವನನ್ನು ಅರಸನನ್ನಾಗಿ ಮಾಡಿದನು. ರಾಮಭೋಜನು ಅಪೂರ್ವ ತುಲಾಭಾರವನ್ನು ಮಾಡಿದುದರಿಂದ ಈ ದೇಶಕ್ಕೆ ತೌಳದೇಶವೆಂದು ಹೆಸರುಂಟಾಯಿತು.

ದಕ್ಷ ಪ್ರಜಾಪತಿಯ ಶಾಪಕ್ಕೊಳಗಾದ ಚಂದ್ರನು ಶಾಪನಿವೃತ್ತಿಗಾಗಿ ಈ ಕ್ಷೇತ್ರದ ಅರಣ್ಯದಲ್ಲಿ ಪರಮೇಶ್ವರನನ್ನು ಕುರಿತು ತಪಸ್ಸು ಆಚರಿಸಿದನು. ಚಂದ್ರನು ತಪಸ್ಸು ಮಾಡಿದ ಸ್ಥಳವು ಅಬ್ಜಾರಣ್ಯವೆಂದು ಹೆಸರು ಪಡೆದಿದೆ. ಈ ಸ್ಥಳದಲ್ಲಿ ಚಂದ್ರಮೌಳೇಶ್ವರ ದೇವಾಲಯವಿದೆ. ಚಂದ್ರ ಪುಷ್ಕರಿಣಿ ಎಂಬ ಪವಿತ್ರ ತೀರ್ಥವಿದೆ. ಉಡುಪ (ನಕ್ಷತ್ರಗಳಿಗೆ ಒಡೆಯ) ಎಂದರೆ ಚಂದ್ರನೆಂದು ಅರ್ಥ. ಉಡುಪನು ತಪಸ್ಸುಮಾಡಿ ಸಿದ್ಧಿಯನ್ನು ಹೊಂದಿದುದರಿಂದ ಈ ಸ್ಥಳವು ಉಡುಪಿ ಎಂದು ಹೆಸರು ಪಡೆದಿದೆ.

ಉಡುಪಿಯ ಪ್ರಸಿದ್ಧಿಯು ದ್ವೈತಮತ ಪ್ರತಿಷ್ಠಾಪನಾಚಾರ್ಯರಾದ ಶ್ರೀಮನ್ಮಧ್ವಾಚಾರ್ಯರಿಂದ ಹೆಚ್ಚಿತು. ಅವರು ಪ್ರತಿಷ್ಠಿಸಿದ ಶ್ರೀಕೃಷ್ಣನಿಂದ ಹೆಚ್ಚಿತು. ಮಧ್ವಾಚಾರ್ಯ ಅವತಾರಕಾಲವು ಶಾ. ಶಕ ೧೧೬೦ ಕ್ರಿ.ಸ್ತ ಶಕ ೧೨೩೮. ಕಲಿವರ್ಷ ೪೩೩೯.

ಉಡುಪಿಯ ಶ್ರೀಕೃಷ್ಣನ ನಿತ್ಯಾಪೂಜಾಕ್ರಮವು ಪ್ರತಿದಿನ ಮುಂಜಾನೆ ೪ ಗಂಟೆಗೆ ಶ್ರೀಕೃಷ್ಣಮಠದ ಹೊರ ಗೋಪುರದಲ್ಲಿ ಮಂಗಳ ಶಂಖಧ್ವನಿಯಾದೊಡನೆ ನೌಬತ್ ನಗಾರಿಯನ್ನು ಬಾರಿಸುವುದರಿಂದ ಪ್ರಾರಂಭವಾಗುತ್ತದೆ. ನಿರ್ಮಾಲ್ಯ ವಿಸರ್ಜನಾ ಪೂಜೆ, ಉಷಃಕಾಲಪೂಜೆ, ಗೋಪೂಜೆ, ಪಂಚಾಮೃತಪೂಜೆ, ಉದ್ವರ್ತನ ಪೂಜೆ, ಕಲಶ ಪೂಜೆ, ತೀರ್ಥಪೂಜೆ, ಅಲಂಕಾರಪೂಜೆ, ಅವಸರಪೂಜೆ, ಮಹಾಪೂಜೆ, ಮುಖ್ಯಪ್ರಾಣ ಪೂಜೆ, ಶ್ರೀಮಧ್ವಾಚಾರ್ಯರ ಪೂಜೆ, ಸಿಂಹಾಸನ ಪೂಜೆ, ಪ್ರದಕ್ಷಿಣ ನಮಸ್ಕಾರ, ವೃಂದಾವನಪೂಜೆ, ತೀರ್ಥದಾನ, ಚಾಮರಸೇವೆ, ನಡೆಯುವವು. ಅಲ್ಲದೇ ವಾರ್ಷಿಕ ವಿಶೇಷೋತ್ಸವಗಳಾದ ಶ್ರೀ ಮಧ್ವನವಮಿ, ಶ್ರೀ ರಾಮನವಮಿ, ವಸಂತೋತ್ಸವ, ನರಸಿಂಹ ಜಯಂತಿ, ಶ್ರೀಕೃಷ್ಣಜಯಂತಿ, ಗಣೇಶ ಚತುರ್ಥಿ, ಅನಂತ ಚತುರ್ದಶಿ, ಬಲೀಂದ್ರ ಪೂಜೆ, ಲಕ್ಷ ದೀಪೋತ್ಸವ ಹಾಗೂ ಜಗತ್ಪ್ರಸಿದ್ಧವಾದ ಪರ್ಯಾಯ ಮಹೋತ್ಸವಗಳೂ ಉಂಟು. ಉಡುಪಿಯ ಪರ್ಯಾಯ ಮಹೋತ್ಸವಕ್ಕೆ ದೇಶದ ನಾನಾಮೂಲೆಗಳಿಂದಲೂ ಜನ ಬರುತ್ತಾರೆ. ವಾದಿರಾಜರು ಈಗ ಚಾಲ್ತಿಯಲ್ಲಿರುವ ಈ ಪದ್ಧತಿಯನ್ನು ಜಾರಿಗೆ ತಂದರು. ಅಷ್ಟಮಠಗಳ ಒಬ್ಬರು ಶ್ರೀಗಳವರಿಂದ ಇನ್ನೊಬ್ಬರು ಶ್ರೀಗಳವರು ಶ್ರೀಕೃಷ್ಣ ಪೂಜಾಧಿಕಾರವನ್ನು ವಹಿಸಿಕೊಳ್ಳುವ ದಿನದ ಪವಿತ್ರ ಸಮಾರಂಭವೇ ಪರ್ಯಾಯ ಮಹೋತ್ಸವವೆನ್ನಿಸುವುದು. ಉಡುಪಿಯ ಅಷ್ಟಮಠಗಳಾದ ಕೃಷ್ಣಾಪುರ ಮಠ, ಪುತ್ತಿಗೆಮಠ, ಶಿರೂರುಮಠ, ಸೋದೆ ಮಠ, ಕಾಣಿಯೂರುಮಠ, ಪೇಜಾವರ ಮಠ, ಅದಮಾರುಮಠ, ಫಲಿಮಾರುಮಠಗಳ ಶ್ರೀಗಳವರು ಎರಡು ವರ್ಷಕ್ಕೊಮ್ಮೆ ಪರ್ಯಾಯ ಮಹೋತ್ಸವಕ್ಕೆ ಅಧಿಕಾರ ಪಡೆದಿರುತ್ತಾರೆ.

ಆನಂದ ತೀರ್ಥರ ಪರಂಪರೆಯಲ್ಲಿ ಉಡುಪಿ ಶ್ರೀ ಕೃಷ್ಣನಪೂಜೆಗಾಗಿ ನಿಂತ ಅಷ್ಟಮಠಗಳ ಯತಿವರೇಣ್ಯರ ಪೈಕಿ ಸುಮಾರು 500 ವರ್ಷಗಳ ಹಿಂದೆ ಸೋದೆ ಮಠದ ಅಧಿಪತಿಗಳಾಗಿ ಪ್ರಜ್ವಲಿಸಿದ ವಾದಿರಾಜರು ಶ್ರೇಷ್ಠರು. ಸಾತ್ವಿಕ ದಂಪತಿಗಳಾದ ಶ್ರೀರಾಮಾಚಾರ್ಯ ಗೌರಮ್ಮ ಇವರು ಕರ್ನಾಟಕ ಉಡುಪಿಯ ಸಮೀಪ



ಶ್ರೀ ವಾದಿರಾಜರು

ಸುಪ್ರಸಿದ್ಧ ಕೋಟೇಶ್ವರದ ಸಮೀಪ ಇರುವ "ಹೂವಿನ ಕೆರೆ" ಎಂಬ ಹಳ್ಳಿಯಲ್ಲಿದ್ದರು. ಗಂಡು ಸಂತಾನವಿಲ್ಲವೆಂಬ ಕೊರಗು ಅವರಲ್ಲಿತ್ತು. ಶ್ರೀವಾಗೀಶತೀರ್ಥರ ಆಶೀರ್ವಾದ ಹಾಗೂ ಹಯಗ್ರೀವ ಸ್ವಾಮಿಯ ಕೃಪೆಯಿಂದ ಗಂಡು ಮಗ ದಂಪತಿಗಳಿಗೆ ಆಯಿತು. ಆದರೆ ಸ್ವಾಮಿಗಳು "ಮಗು ಮನೆಯಲ್ಲಿ ಹುಟ್ಟಿದರೆ ನಿಮಗೆ ಹೊರಗೆ ಹುಟ್ಟಿದರೆ ನಮ್ಮ ಶ್ರೀಕೃಷ್ಣನ ಮಠಕ್ಕೆ ಕೊಡಬೇಕೆ"ಂದು ಆಶ್ವಾಸನೆ ಪಡೆದು ಕೊಂಡಿದ್ದರು.

ದೈವಲೀಲೆಯಂತೆ ಪತ್ನಿಯು ಹೊಲಕ್ಕೆ ಹೋದಾಗ ಗದ್ದೆಯಲ್ಲೇ ಮಗುವಿನ ಜನನವಾಯಿತು. ಮಾತಿನಂತೆ ಗಂಡ ಹೆಂಡತಿ ಮಗುವನ್ನು ಸ್ವಾಮಿಗಳಿಗೆ ಒಪ್ಪಿಸಿದರು. ವಾಗೀಶರು ಮಗುವಿಗೆ ತಾವು ಪೂಜಿಸುತ್ತಿದ್ದ ಭೂವರಾಹಸ್ವಾಮಿಯ ಹೆಸರನ್ನೇ ಇಟ್ಟರು.

ಉತ್ತರ ಕನ್ನಡ ಜಿಲ್ಲೆಯ ಶಿರಸಿಯಿಂದ 12 ಮೈಲಿನಲ್ಲಿ ಇರುವ ಇತಿಹಾಸ ಪ್ರಸಿದ್ಧ

**ಶ್ರೀ ಬಿ. ಬಸವರಾಜ್‌ಶೇಟ್**

ಸೋಂದಾನಲ್ಲಿ ಹಯಗ್ರೀವ ಮೂರ್ತಿಯನ್ನು ಶ್ರೀರಾಜರು ಬಗರಿಯಿಂದ ತೆರಿಸಿದರೆಂದು ಪ್ರತೀತಿ ಇದೆ. ಇಲ್ಲಿ ಧವಳ ಗಂಗಾತೀರ್ಥ, ವಾದಿರಾಜರ ಗುಡಿ, ಹಾಗೂ ಭೂತರಾಜರ ಗುಡಿ ಇವೆ. ಪ್ರಕೃತಿ ಸೌಂದರ್ಯ ದಿಂದ, ಶಾಂತಿಧಾಮ ವೆಂದು ಹೆಸರು ಪಡೆದ "ಸೋಂದಾ'' ಒಂದು ಸುಪ್ರಸಿದ್ಧ ಪುಣ್ಯಕ್ಷೇತ್ರ.

ಸೋದಾ ವೈಷ್ಣವ ಕ್ಷೇತ್ರ. ಇಲ್ಲಿ ಗುರು ಸಾರ್ವಭೌಮ ವಾದಿರಾಜತೀರ್ಥರ ಬೃಂದಾವನ ಮತ್ತು ಮಠವಿದೆ. ಇದಲ್ಲದೆ ಸ್ಮಾರ್ತ ಹಾಗೂ ವೀರಶೈವ ಮಠಗಳೂ ಇವೆ. ಶಾಲ್ಮಲೀ ನದಿಯ ಮಧ್ಯದಲ್ಲಿ ವಾದಿರಾಜರು ತಪಸ್ಸು ಮಾಡಿದ ಕುರುಹಾಗಿ ಶಿಲೆಯ ಮೇಲೆ ಪಾದ ಚಿಹ್ನೆ ಹಾಗೂ ಹಯಗ್ರೀವ ಮೂರ್ತಿಯನ್ನು ಕೆತ್ತಲಾಗಿದೆ. ಈ ಪ್ರದೇಶ ಸುಂದರವಾಗಿದ್ದು ತಪೋವನವೆಂದು ಹೆಸರು ಪಡೆದಿದೆ.

ಇತಿಹಾಸವನ್ನು ಅವಲೋಕಿಸಿದಾಗ, ಹಿಂದೆ ದೈವಜ್ಞ ಸುವರ್ಣ ಕಲಾಕಾರರಾದ ಆಚಾರ್ಯರು ವಿನಾಯಕ ವಿಗ್ರಹವನ್ನು ಎರೆಯುತ್ತಿರುವಾಗ ಗಣೇಶನ ಬದಲಿಗೆ ಹಯಗ್ರೀವ ಮೂರ್ತಿ ಮೂಡಿ ಬಂದು ಸ್ವಪ್ನ ಸೂಚಿಯಂತೆ ವಾದಿರಾಜರು ಬಂದು, ಆಮೂರ್ತಿಯನ್ನು ತೆಗೆದುಕೊಂಡು ಅಷ್ಟ ಮಠದಲ್ಲಿ ಪೂಜಿಸಿದರು. ವಾದಿರಾಜ ಗುರು ಸಾರ್ವಭೌಮರು ದೈವಜ್ಞ ಬ್ರಾಹ್ಮಣ ಸಮಾಜದವರನ್ನು ತಮ್ಮ ಪರಮ ಶಿಷ್ಯರನ್ನಾಗಿ ಮಾಡಿಕೊಂಡರು.

ವಾದಿರಾಜಗುರು ವರೇಣ್ಯರು ತಮ್ಮ ಅವತಾರ ಮಾಡಿದ ಕಾಲದಲ್ಲಿ ಅನೇಕ ಸಾಧು ಸಜ್ಜನರನ್ನುದ್ಧರಿಸಿ, ಪುನೀತರನ್ನಾಗಿ ಮಾಡಿರುವರೆಂಬುದು ಅವರ ಚರಿತ್ರೆಯನ್ನು ಬಲ್ಲವರೆಲ್ಲರಿಗೂ ವಿದಿತ ವಿಷಯವಾಗಿದೆ.

ವಾದಿರಾಜರು ಹಯಗ್ರೀವ ದೇವರ ಉಪಾಸನೆಯನ್ನು ಬಹುಭಕ್ತಿಯಿಂದ ಮಾಡಿ, ಆ ದೇವರ ವಿಶೇಷ ಅನುಗ್ರಹಕ್ಕೆ ಪಾತ್ರರಾದರು. ಈ ಕುದುರೆಮುಖದ ದೇವರಿಗೆ ಅವರು ನಿತ್ಯವೂ "ಮಡ್ಡಿ'' ಯನ್ನು ನಿವೇದನೆ ಮಾಡುತ್ತಿದ್ದರು. ದೊಡ್ಡದೊಂದು ಹರಿವಾಣದ ತುಂಬಾ ಈ ಭಕ್ಷ್ಯವನ್ನು ತುಂಬಿ ಅದನ್ನು ತಲೆಯ ಮೇಲಿಟ್ಟುಕೊಂಡು ಕುಳಿತು ಹಯಗ್ರೀವನನ್ನು ಸ್ಮರಿಸುತ್ತಿದ್ದರು. ಹಯವದನ ಸುಂದರ ಬಿಳಿಯ ಬಣ್ಣದ ಕುದರೆ ರೂಪದಿಂದ ಬಂದು ವಾದಿರಾಜರ ಎರಡು ಭುಜಗಳ ಮೇಲೂ ತನ್ನೆರಡು ಮುಂಗಾಲುಗಳನ್ನು ಇರಿಸಿ–ಸ್ವೀಕರಿಸಿ ಸ್ವಲ್ಪ ಪ್ರಸಾದವನ್ನು ಸ್ವಾಮಿಯವರಿಗೆ ಬಿಡುವುದು ನಿತ್ಯ ಪದ್ಧತಿಯಾಯಿತು.

ಸೋದಾಕ್ಷೇತ್ರವನ್ನು ಆಳುತ್ತಿದ್ದ ಅರಸಪ್ಪ ನಾಯಕನು ಮಹಾತೇಜಸ್ವಿಗಳಾದ ಗುರುಸಾರ್ವಭೌಮರ ಮಹಾಮಹಿಮೆಯನ್ನು ಕಂಡು, ತನ್ನರಾಜ್ಯದೊಡನೆ ಅನೇಕ ವಜ್ರ ವೈಡೂರ್ಯ ಬಂಗಾರದ ಆಭರಣಗಳಿಂದ 18 ಬಿರುದುಗಳನ್ನು ಅರ್ಪಿಸಿ ವಾದಿರಾಜರಿಗೆ ಶರಣಾದನು. ಅಂದಿನಿಂದ ಇದು ಸೋದೆ ಮಠವೆಂದು ಪ್ರಸಿದ್ಧವಾಯಿತು. ಅಲ್ಲಿ ಇದ್ದ ಬ್ರಹ್ಮ ರಾಕ್ಷಸನು ಅನೇಕ ಜನರಿಗೆ ನಾನಾರೀತಿಯಲ್ಲಿ ಪೀಡಿಸುತ್ತಿದ್ದನು. ಅಂಥವರನ್ನು ಸರಿಯಾದ ಮಾರ್ಗಕ್ಕೆ ತಂದದ್ದರಿಂದ ಈಗಲೂ ಸೋದೆಯಲ್ಲಿ 'ನಾರಾಯಣಭೂತ' ಪೂಜೆ ನಡೆಯುತ್ತದೆ. ಗುರುಗಳದಯೆಯಿಂದ ಅವನ ಶಾಪ ಕಳೆಯಿತು. ಕರ್ನಾಟಕ ರಾಜ್ಯದಲ್ಲಿಯೇ ಪ್ರಸಿದ್ಧವಾದ ಧರ್ಮಸ್ಥಳದ ಮಂಜುನಾಥ ಸ್ವಾಮಿಯನ್ನು ವಾದಿರಾಜರೇ ಪ್ರತಿಷ್ಠಾಪಿಸಿದರು. ಉಡುಪಿಯ ಪರ್ಯಾಯೋತ್ಸವದಲ್ಲಿ ವಾದಿರಾಜರ ವ್ಯವಸ್ಥೆ ಇಂದಿಗೂ ನಡೆಯುತ್ತಲಿದೆ.

ವಾದಿರಾಜರು ಅಸ್ಪೃಶ್ಯರನ್ನು ಶಿಷ್ಯರನ್ನಾಗಿ ಮಾಡಿಕೊಂಡರು. ಉಡುಪಿಗೆ ಬಂದ ಮಹಾಭಕ್ತ ಕನಕದಾಸರನ್ನು ಕರೆಯಿಸಿ ಗೌರವದಿಂದ ಕಂಡರು. ಯುದ್ಧದಲ್ಲಿ ಸೋತ ಅರಸಪ್ಪ ನಾಯಕನು ಭೂತರಾಜನ ಸಹಾಯದಿಂದ ರಾಜ್ಯವನ್ನು ಪಡೆದು ವಾದಿರಾಜರ ಶಿಷ್ಯನಾದನು. ಕಷ್ಟದಲ್ಲಿದ್ದವರಿಗೆ ಸಹಾಯಮಾಡುತ್ತ, ಕೆಟ್ಟವರ ಅಹಂಕಾರವನ್ನು ಮುರಿದರು. ಅನೇಕ ಮಂದಿ ಶಿಷ್ಯರಿಗೆ ವಿದ್ಯೆ ಕಲಿಸಿದರು, ಭಕ್ತಿ ಮಾರ್ಗದ ಮೂಲಕ ಸುಜ್ಞಾನದ ಬೆಳಕನ್ನು ಬೀರಿ ಸಮಾಜದ ಉದ್ಧಾರಕ್ಕಾಗಿ ಶ್ರಮಿಸಿದರು. ಅನೇಕ ಭಕ್ತರಿಗೆ ಅನೇಕ ರೀತಿಯ ವ್ಯಾಧಿಗಳನ್ನು ಗುಣಪಡಿಸಿದರು. ಈ ಗುರು ಸಾರ್ವಭೌಮರು ಈ ತೆರದಿಂದ ಭಕ್ತರ ದೋಷಗಳನ್ನು ಪರಿಹರಿಸಿ ಇಷ್ಟಾರ್ಥಗಳನ್ನು ಕೊಡುವ ಮಹಾಶಕ್ತಿಯುಳ್ಳವರಾಗಿದ್ದು ಬಹು ಜನರನ್ನು ಉದ್ಧರಿಸಿದರು.

ವಾದಿರಾಜರು ಬಹುದೊಡ್ಡ ವಿದ್ವಾಂಸರಾಗಿದ್ದರು. ಸಂಸ್ಕೃತ ಕನ್ನಡ ಎರಡೂ ಭಾಷೆಗಳಲ್ಲಿ ಅನೇಕ ಸದ್ಗ್ರಂಥಗಳು, ಕಾವ್ಯ ಕೃತಿಗಳು ಪ್ರಸಿದ್ಧವಾಗಿವೆ. "ಮಹಾಭಾರತ ಲಕ್ಷಾಲಂಕಾರ'' ವೆಂಬ ಗ್ರಂಥ ಅಪೂರ್ವ.

1402 ರಲ್ಲಿ ಹುಟ್ಟಿದ ಅವರು ಒಂದು ನೂರು ಇಪತ್ತು ವರ್ಷಗಳು ಬಾಳಿದರು. ಶಾಲಿವಾಹನ ಶಕೆ ವರ್ಷ 1522 ನೇ ಶಾರ್ವರಿ ಸಂವತ್ಸರದ ಫಾಲ್ಗುಣ ಬಹುಳ ತೃತೀಯಾ ಸ್ವಾತಿ ನಕ್ಷತ್ರ, ಬುಧವಾರದಂದು ವೃಂದಾವನವನ್ನು ಸಶರೀರರಾಗಿ ಪ್ರವೇಶಿಸಿದರು.

ಅಲ್ಲಿಂದ ವಿಮಾನದ ಮೂಲಕ ವೈಕುಂಠಕ್ಕೆ ತೆರಳಿದ ಮಹಾನುಭಾವರು ವಾದಿರಾಜರನ್ನು ಭಕ್ತರು "ಗುರುರಾಜ! ನಮ್ಮನ್ನು ಬಿಟ್ಟು ಹೋಗಬೇಡಿರಿ'' ಎಂದಾಗ ತಮ್ಮ ಕಾವಿಶಾಟಿಯನ್ನು ಪಾದುಕೆಗಳನ್ನು ಕೆಳಕ್ಕೆ ಎಸೆದು, ತಾವು ಒಂದು ರೂಪದಿಂದ ವೃಂದಾವನದಲ್ಲಿಯೂ ಸನ್ನಿಹಿತರಾಗಿರುತ್ತೇವೆಂದು ಅಭಯಕೊಟ್ಟಿರುವ ಮಹಾನುಭಾವರಿವರು.

ವಾದಿರಾಜರ ಪುಣ್ಯಮಯ ಅವತಾರದ ಸವಿ ನೆನಪು ಸಜ್ಜನರ ಹೃದಯದಿಂದ ಅಚ್ಚಳಿಯದೆ ಉಳಿದುಕೊಂಡಿದೆ, ಭಕ್ತರು ತಮ್ಮ ಕಷ್ಟಗಳ ಪರಿಹಾರಕ್ಕಾಗಿ ಅವರ ವೃಂದಾವನಕ್ಕೆ ಪೂಜೆ ಸಲ್ಲಿಸುತ್ತಾರೆ. ಕಲಿಯುಗದ ಕಾಮಧೇನುವಾಗಿರುವ ಸೋದೆ; ಒಂದು ಶಾಂತಿಯ ಪ್ರಸಿದ್ಧ ಐತಿಹಾಸಿಕ ಕ್ಷೇತ್ರವಾಗಿದೆ.

ಗುರುಸಾರ್ವಭೌಮ ವಾದಿರಾಜರು ತಿರುಪತಿಯಲ್ಲಿ ವಾಸ್ತವ್ಯಮಾಡಿ ಶ್ರೀನಿವಾಸನನ್ನು ಆರಾಧನೆ ಮಾಡಿದ್ದಾರೆ. ತಿರುಪತಿ ವೆಂಕಟರಮಣನನ್ನು ಕುರಿತು ಹಲವಾರು ಹಾಡುಗಳನ್ನು ಹಾಡಿದ್ದಾರೆ.

ಗುರುರಾಜರ ಆಶೀರ್ವಾದ ಸದಾ ಭಕ್ತರ ಮೇಲೆ ನೆಲೆಸಲಿ ಎಂದು ಹಾರೈಸೋಣ.

★

# ವ್ಯಾಸರಾಯರ ಶೈಲಿ

ಯತಿಚತುಷ್ಟಯರಾದ ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು ಹಾಗೂ ವ್ಯಾಸ ತತ್ತ್ವಜ್ಞರು ಕನ್ನಡ ಭಾಷೆಯಲ್ಲಿ ಭಕ್ತಿಭರಿತ ಸಾಹಿತ್ಯವನ್ನು ರಚಿಸಿ ಕನ್ನಡ ಸಾಹಿತ್ಯಕ್ಕೆ ಬೆಲೆಯುಳ್ಳ ಕಾಣಿಕೆಯನ್ನು ನೀಡಿದವರು. ಈ ಯತಿಚತುಷ್ಟಯರಲ್ಲಿ ದ್ವಿತೀಯರೆನಿಸಿರುವ ವ್ಯಾಸರಾಜರ ಕಾಣಿಕೆ ಹರಿದಾಸ ಸಾಹಿತ್ಯಕ್ಕೆ ಅಮೂಲ್ಯವಾಗಿರುವುದು.

ವ್ಯಾಸರಾಜರು (ಕ್ರಿ. ಶ. 1447–1539) ಸಂಸ್ಕೃತದಲ್ಲಿ ನ್ಯಾಯಾಮೃತ, ತರ್ಕ ತಾಂಡವ, ಚಂದ್ರಿಕಾ – ಇತ್ಯಾದಿ ದ್ವೈತ ಸಿದ್ಧಾಂತದ ಪ್ರಮೇಯಗಳನ್ನು ವಿಶದೀಕರಿಸುವ ಪ್ರೌಢವೂ, ವ್ಯಾಖ್ಯಾನಸಾಪೇಕ್ಷ ಸಿದ್ಧಾಂತವೂ ಆದ ಗ್ರಂಥಗಳನ್ನು ರಚಿಸಿರುವುದರೊಡನೆ ಅನುಭಾವಪೂರ್ಣವಾದ, ಸಿದ್ಧಾಂತ ಸಮ್ಮತವೂ, ಸಂಸ್ಕೃತನಭಿಜ್ಞ ಸಾತ್ತ್ವಿಕ ಸಾಧನಾಪೇಕ್ಷೀಸುಜನರಿಗೆ ಮನೋಲ್ಲಾಸಕರವೂ, ರಾಗ, ತಾಳ, ಲಯ ಬದ್ಧವೂ ಆದ ಸಂಗೀತದ ಸಹಚರ್ಯೆಯುಳ್ಳ ಕೀರ್ತನೆ, ಉಗಾಭೋಗ ಮತ್ತು ಸುಳಾದಿಗಳನ್ನು ಯಥೇಚ್ಛವಾಗಿ ರಚಿಸಿರುವರು. ಆದರೆ ನಮಗೆ ವ್ಯಾಸರಾಜರ ಕೃತಿಗಳು ಇಂದು ಕೇವಲ ಇನ್ನೂರಕ್ಕೆ ಸ್ವಲ್ಪ ಮೇಲ್ಪಟ್ಟು ಸಂಖ್ಯೆಯಷ್ಟು ಮಾತ್ರ ಲಭ್ಯ. ದೊರೆತಿರುವ ವ್ಯಾಸರಾಜರ ಕೃತಿಗಳನ್ನು ಪರಿಶೀಲಿಸಿದಾಗ ಭಾರತ, ಭಾಗವತ, ರಾಮಾಯಣ ಹಾಗೂ ವೇದೋಪನಿಷತ್ತುಗಳಲ್ಲಿ ವ್ಯಾಸರಾಜರಿಗಿದ್ದ ಪಾಂಡಿತ್ಯದ ಪರಿಚಯವಾಗುತ್ತದೆ. ಹಾಗೂ ಅವರಿಗೆ ಭಗವಂತನಲ್ಲಿದ್ದ ಗಾಢ ಭಕ್ತಿಯ ಕೆಲವು ಎಳೆಗಳು ನಮ್ಮ ಮನಸ್ಸನ್ನು ಸ್ಪಂದಿಸುತ್ತವೆ.

ಭಗವಂತನ ಸರ್ವೋತ್ತಮತ್ವವನ್ನೂ, ಸೃಷ್ಟ್ಯಾದ್ಯಷ್ಟ ಕರ್ತೃತ್ವ ಶಕ್ತಿಯನ್ನೂ, ಗುಣಪೂರ್ಣತ್ವವನ್ನೂ, ನಿರ್ದೋಷತ್ವವನ್ನು, ಜೀವರ ಅಲ್ಪತೆ, ಅಜ್ಞಾನ, ದುಃಖ ಸ್ವರೂಪ, ಇತ್ಯಾದಿಗಳನ್ನು ತರ್ಕಬದ್ಧವಾಗಿ ಪ್ರತಿಪಾದಿಸುವ ಶಕ್ತಿ–ವಿದ್ವತ್ತುಗಳನ್ನು ಕರಗತ ಮಾಡಿಕೊಂಡವರು, ಸರ್ವೋತ್ತಮನಾದ ಶ್ರೀಹರಿಯಲ್ಲಿ ಭಕ್ತಿಯನ್ನೂ, ಕರ್ಮಗಳನ್ನಾಚರಿಸುವಾಗ ಅನುಸಂಧಾನ ಪೂರ್ವಕ ಭಗವಂತನ ಚಿಂತನೆಯನ್ನು ಮಾಡುವ ಅಭ್ಯಾಸ ಬೆಳೆಸಿಕೊಳ್ಳದಿದ್ದರೆ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ನಿಯಂತ್ರಿಸದಿದ್ದರೆ, ಭಗವಂತನ ಲೀಲಾವಿಲಾಸಗಳನ್ನು ಕೇಳಿ ಆನಂದಬಾಷ್ಪ ಸುರಿಸದಿದ್ದರೆ ಭಗವಂತನ ಮತ್ತು ಜೀವರ ಸ್ವರೂಪಗಳನ್ನು ಶಬ್ದಜಾಲದಿಂದ ಕೇವಲ ಪ್ರತಿಪಾದಿಸುವುದರಿಂದ ಎಂದೂ ದರ್ಶನವಾಗುವುದಿಲ್ಲವೆಂದು ಶಾಸ್ತ್ರೋಕ್ತಿ ಇರುವುದರಿಂದ ವ್ಯಾಸರಾಜರು ಭಗವಂತನನ್ನೂ ಇತರ ದೇವತೆಗಳನ್ನು ಭಕ್ತಿ ಪೂರ್ವಕವಾಗಿ ಮಾತೃಭಾಷೆಯಲ್ಲಿ ಸ್ತುತಿಸಿರುವರು. ಆದುದರಿಂದ ಇದು ಅನುಭಾವ ಸಾಹಿತ್ಯವೆನಿಸಿರುವುದು. ಇಂತಹ ವ್ಯಾಸರಾಜರ ಕೃತಿಗಳನ್ನು ನಾನಾದೃಷ್ಟಿಗಳಿಂದ ಅಧ್ಯಯನ ಮಾಡುವುದಕ್ಕೆ ಅವಕಾಶವಿದ್ದರೂ ಪ್ರಕೃತ ಲೇಖನದಲ್ಲಿ ಇವರ ಕನ್ನಡ ಕೃತಿಗಳ ಶೈಲಿಯ ಸ್ವರೂಪವೇನೆಂಬುವದನ್ನು ಮಾತ್ರ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

'ಶೈಲಿ' ಎಂದರೆ ಬರಹದ ಅಥವಾ ಹಾಡಿನ ಸಾಹಿತ್ಯದ 'ವಚನ ವಿನ್ಯಾಸ'; ಪದಸಂಘಟನಾಕ್ರಮ, ಅಭಿವ್ಯಕ್ತಿಯ ಸ್ವರೂಪ; ಕವಿಯೊಬ್ಬನ ರಚನೆಯಲ್ಲಿ ಕಂಡು ಬರುವ ವೈಶಿಷ್ಟ್ಯ. ಕವಿಯು ತನ್ನದೇ ಆದ ವಿಶಿಷ್ಟ ಶೈಲಿಯನ್ನು ಬೆಳೆಸಿಕೊಂಡಿದ್ದರೆ ಅವನ ರಚನೆಯನ್ನು ನೋಡಿದಾಕ್ಷಣ ಆ ಕೃತಿ ಇಂತಹ ಕವಿಯಿಂದಲೇ ರಚಿತವಾಗಿರುವುದೆಂಬುದನ್ನು ಸ್ಪಷ್ಟವಾಗಿ ಅರಿಯುವಂತಹ, ಇತರರಿಂದ ಅನುಸರಿಸಲಾಗದಂತಹ ರಚನಾಕ್ರಮವೆಂದು ನಮಗೆ ತಿಳಿಯುತ್ತದೆ. ಇದು ಇತರ ಕವಿಗಳ ರಚನಾಕ್ರಮಕ್ಕಿಂತ ಭಿನ್ನವಾಗಿರುತ್ತದೆ. ಒಳ್ಳೆಯ ಶೈಲಿಯಲ್ಲಿ ಕೃತಿ ನಿರ್ಮಾಣವಾಗಿದ್ದರೆ ಅದರಲ್ಲಿ ಸರಳತೆ, ಸೌಕುಮಾರ್ಯಗಳೊಡನೆ ವಾಕ್ಯಗಳು ರಸೋಕ್ತಿಯಾಗಿದ್ದು ಓದುಗರಿಗೆ ಆನಂದ ಸುಲಭವಾಗಿ ದೊರೆಯುತ್ತದೆ. ಭಾವಕ್ಕೂ – ಬಂಧಕ್ಕೂ ಅನ್ಯೋನ್ಯ ಸಂಬಂಧವಿರುತ್ತದೆ. ಪದ ಸಂಘಟನೆಯಲ್ಲಿ ಯಾವ ಬದಲಾವಣೆಯೂ ಅಸಾಧ್ಯ-ಅನಗತ್ಯ ಎನಿಸುತ್ತದೆ. ಶಬ್ದಾರ್ಥಗಳಲ್ಲಿ ಸಾಮರಸ್ಯವಿರುತ್ತದೆ; ಉದಾತ್ತ ವಿಚಾರವು ಔಚಿತ್ಯಪೂರ್ಣ ಪದಗಳ ಮೂಲಕ ಪ್ರಕಟವಾಗಿರುತ್ತದೆ; ಪ್ರಾಸಾನುಪ್ರಾಸಗಳಲ್ಲಿ ಧ್ವನಿಗಳ ದೊಂಬರಾಟವಿಲ್ಲದೆ ಅರ್ಥ ಮುಖ್ಯವಾಗಿರುತ್ತದೆ; ಒಮ್ಮೆ ಓದಿದ ಕೃತಿಗಳನ್ನೂ ಮತ್ತೆ ಓದಬೇಕೆಂಬ ಹಂಬಲ ಮೂಡಿಸುವ, ಓದಿದ ಮೇಲೆ ಆ ರಚನೆಯ ಹಲವು ಸಾಲುಗಳು ಸಹಜವಾಗಿ ನೆನಪಿನಲ್ಲುಳಿಯುವ, ದಿನನಿತ್ಯದ ಬದುಕಿನ ಅನೇಕ ಹಂತಗಳಲ್ಲಿ ಆ ಸಾಲುಗಳನ್ನು ಸಹಜವಾಗಿ ಪ್ರಯೋಗಿಸುವಂತಾಗುವುದು ಉತ್ತಮ ಶೈಲಿಯ ಪ್ರಧಾನ ಗುಣಗಳೆನ್ನಬಹುದು.

ಡಾ॥ ಕೆ. ಗೋಕುಲನಾಥ

ವ್ಯಾಸರಾಜರ ಕೃತಿಗಳಲ್ಲಿ ಹರಿಸರ್ವೋತ್ತಮತ್ವ, ದೇವತಾ ಸ್ತೋತ್ರ, ಗುರುಸ್ತೋತ್ರ, ವಾಯುದೇವರ ಅವತಾರತ್ರಯ, ಹರಿದಾಸರ ಲಕ್ಷಣ, ಬಿಂಬಪೂಜೆ, ಬದುಕಿನ ಗುರಿ, ಕೃಷ್ಣಲೀಲೆ, ಗೋಪಸ್ತ್ರೀಯರ ಮಧುರ ಭಕ್ತಿ–ವಿರಹ ಇತ್ಯಾದಿ ವಿಷಯಗಳು ನಿರೂಪಿತವಾಗಿರುವುವು. ಈ ವಸ್ತು ವಿಷಯಗಳ ಚಿತ್ರಣ ಎಂಥ ಶೈಲಿಯಲ್ಲಿ ವರ್ಣಿಸಿರುವರೆಂಬುದನ್ನು ದೃಷ್ಟಾಂತ ಪೂರ್ವಕವಾಗಿ ಕೆಲವನ್ನು ಸಮೀಕ್ಷಿಸಲಾಗಿದೆ.

ವಾಯುದೇವರು ಹನುಮ ಭೀಮ ಮಧ್ವಾವತಾರಗಳನ್ನೆತ್ತಿ ಭಗವಂತನ ಸೇವೆಯನ್ನು ಮಾಡಿದ ಪರಿಯನ್ನು ವರ್ಣಿಸುವ "ಜಯ ವಾಯು ಹನುಮಂತ ಜಯ ಭೀಮ ಬಲವಂತ ಜಯ ಪೂರ್ಣಮತಿವಂತ ಜಯ ಸಲಹೋ ಸಂತ" ಎಂಬ ಕೃತಿಯ ಪಲ್ಲವಿಯ

‘ತ’ ಕಾರದ ಪ್ರಾಸಾನುಪ್ರಾಸ ಹಿತವಾಗಿರುವುದರೊಡನೆ ಹನುಮ ಭೀಮರು ಬಲವಂತರೆಂದೂ, ಮೂರು ಅವತಾರಗಳಲ್ಲಿಯೂ ವಾಯು ದೇವರು ‘ಸಂತಶ್ರೇಷ್ಠ’ರಾಗಿ ಬಾಳಿದರೆಂದೂ ಹೇಳಿರುವ ಶೈಲಿ ಸೊಗಸಾಗಿದೆ. ಈ ಪಲ್ಲವಿಯ ಅಂತ್ಯಪ್ರಾಸದ ಸೊಬಗು ಶಬ್ದ ಸೌಂದರ್ಯವನ್ನು ಅರ್ಥ ಸೌಂದರ್ಯವನ್ನೂ ಒಟ್ಟುಗೂಡಿಸುತ್ತದೆ.

ಶ್ರೀಪಾದರಾಜರು ತೋರಿದ ಮಹಿಮಾತಿಶಯಗಳನ್ನು ಚಿತ್ರಿಸಿರುವ ‘ಮಹಿಮೆ ಸಾಲದೆ ಇಷ್ಟೇ ಮಹಿಮೆಸಾಲದೆ’ ಎಂಬ ಕೀರ್ತನೆಯಲ್ಲಿ ಅಂದು ಜನಜನಿತವಾದ ಶ್ರೀಪಾದರಾಯರ ಮಹಿಮೆಗಳನ್ನು ದಾಖಲಿಸಿ, ಅವರ ವೇಷ ಭೂಷಣಗಳು ಚಿತ್ತ ಕಣ್ಣು ಕಟ್ಟುವಂತೆ ಚಿತ್ರಿಸಿರುವರು. ‘ಮುತ್ತಿನ ಕವಚ ಮೇಲ್ಕು ಲಾವಿ ರತ್ನ ಕೆತ್ತಿದ ಕರ್ಣಕುಂಡಲ ಕಸ್ತೂರಿ ತಿಲಕ ಶ್ರೀಗಂಧ ಲೇಪನ ವಿಸ್ತರದಿಂದ ಮೆರೆದು ಬರುವ’ ಶ್ರೀಪಾದರ ವೈಭವದ ಚಿತ್ರವನ್ನು ಕೊಡುವಲ್ಲಿ ಶಬ್ದಲಾಲಿತ್ಯ, ಲಯಬದ್ಧವಾಗಿರುವ ಶಬ್ದಗಳ ನಡೆ ಆಕರ್ಷಕವಾಗಿವೆ. ಈ ಹಾಡನ್ನು ಹಾಡಿದಾಗ ರಾಜರು ಪ್ರಯೋಗಿಸಿರುವ ವಿಸ್ತರ ಎಂಬ ಶಬ್ದದ ಧ್ವನಿ ಲಾಲಿತ್ಯ ಇತರ ಶಬ್ದಗಳೊಡನೆ ಹೊಂದುತ್ತದೆ ಹಾಗೂ ಸಾಮಾನ್ಯವಾಗಿ ‘ವಿಸ್ತಾರ’ ಎಂದು ಪ್ರಯೋಗಿಸುವ ಶಬ್ದವನ್ನು ‘ವಿಸ್ತರ’ ಎಂದು ಪ್ರಯೋಗಿಸಿರುವುದರ ಸಾರ್ಥಕತೆಯಲ್ಲಿ ರಾಜರ ಶೈಲಿಯ ವೈಶಿಷ್ಟ್ಯವನ್ನು ಗುರುತಿಸಬಹುದು.

ಮಾನವನ ಮನಸ್ಸಿನಲ್ಲಿ ಜಾಗೃತವಾಗಿರುವ ಶತ್ರು ‘ಗರ್ವ’. ಇದರ ನಿಯಂತ್ರಣವಿಲ್ಲದಿದ್ದರೆ ಸಾಧನೆ ಅಸಾಧ್ಯ, ಹಾಗೂ ಲೋಕದ ಜನರಿಂದಲೂ ಅಂತಹವನು ನಿಂದಿತನಾಗುತ್ತಾನೆ. ಈ ಅಹಂಕಾರ ನಿರಸನ ಮುಖ್ಯವೆಂದು ವ್ಯಾಸರಾಜರು ಹೇಳುತ್ತಾ “ಬೀಗದಿರು ಬೀಗದಿರು ಎಲೆ ಮಾನವಾ” ಎಂದು ಎಚ್ಚರಿಸಿರುತ್ತಾರೆ. ‘ವಿರಕ್ತಿಯು ಹನುಮನೆ? ವಿವೇಕದಲಿ ವಸಿಷ್ಠನೆ? ಸತ್ಯದಿ ಹರಿಶ್ಚಂದ್ರನೆ? ಚೆಲುವಿನಲಿ ರಾಮನೆ? ಫಲದಲಿ ವಿಶ್ವಾಮಿತ್ರನೆ? ತ್ಯಾಗದಲಿ ಕರ್ಣನೆ? ಭಕ್ತಿಯಲಿ ಭರತನೆ? ಯುಕ್ತಿಯಲಿ ಇಂದ್ರಸುತನೆ?” ಎಂದು ಪ್ರಶ್ನಮಾಲಿಕೆಯನ್ನು ನಮ್ಮ ಮುಂದಿಟ್ಟು ಅರ್ಹತೆಯಿಲ್ಲದಿದ್ದರೂ ಏಕೆ ಬೀಗುತ್ತಿಯೆ? ಎಂದು ಶಾಂತ ರೀತಿಯಲ್ಲಿ ಕೇಳಿ ತಿಳುವಳಿಕೆ ನೀಡಿರುವ ಈ ಕೀರ್ತನೆಯ ಶೈಲಿ ವಿಸ್ಮಯಕಾರಿಯಾಗಿದೆ; ಆದಿ ಅಂತ್ಯಹಾಗೂ ಅನುಪ್ರಾಸಗಳ ವೈಭವ ಸಹಜವಾಗಿ ಮೂಡಿವೆ.

‘ನಿಂದಾಸ್ತುತಿ’ ಹರಿದಾಸರು ರಚಿಸಿರುವ ವಿಶಿಷ್ಟ ಬಗೆಯ ಸ್ತೋತ್ರ ಸಾಹಿತ್ಯ. ಇವುಗಳನ್ನು ಓದಿದಾಕ್ಷಣ ನಗು ಉಂಟಾಗಿ ಹಾಸ್ಯರಸದನುಭವವಾಗುತ್ತದೆ. ಭಗವಂತನ ಸುಗುಣಗಳಿಗೆ ದೋಷದ ಲೇಪವಿಟ್ಟು ಹಾಡಿರುವ ಕೃತಿಗಳನ್ನೋದಿದಾಗ ವ್ಯಾಸರಾಜರ ಭಾವಪ್ರೌಢಿಮೆಯ ಅರಿವಾಗಿ ಆನಂದಿಸುವಂತಾಗುತ್ತದೆ. ‘ಏನ ಬೇಡಲೊ ನಿನ್ನ ದೇವಾಧಿದೇವ ಏನಹುದೊ ನಿನ್ನೊಳಗೆ ಮಹಾನುಭಾವ’ ಎಂಬ ಕೀರ್ತನೆಯಲ್ಲಿ ಭಕ್ತರಿಗೆ ಬೇಕಾದುದನ್ನು ಕೊಡಲು ಭಗವಂತನಲ್ಲಿ ಏನೂ ಇಲ್ಲವೆಂಬಂತೆ ಹೀಗೆ ಚಿತ್ರಿಸಿರುವರು “ಮನೆಯ ಬೇಡಲೆ ವನಧಿ; ಹಾಸಿಗೆಯು ವಟಪತ್ರ; ವನಿತೆಯರ ಬೇಡಲೆ ಬ್ರಹ್ಮಚಾರಿ; ಘನ ಸಖ್ಯವನ್ನು ಬಯಸೆ ನೆನೆಯುವರ ಮನದಲಿಹೆ; ತಿನುವುದಕೆ ಕೇಳುವೆನೆ ನವನೀತಚೋರ” ಎಂಬ ಅವರ ವಾದಸರಣಿ ಮನೋಜ್ಞವಾಗಿದೆ. ಏನು ಬೇಡಬೇಕೆಂಬ ಚಿಂತೆಯುಂಟಾಗದೆ ಎನ್ನುವ ವ್ಯಾಸರಾಜರು ಈ ಕೀರ್ತನೆಯ ಕೊನೆಯಲ್ಲಿ, “ಭಕ್ತರನು ವಂಚಿಸುತ ನೀನು ಬಚ್ಚಿಟ್ಟಿರುವ ಮುಕ್ತಿಕಾಂತಿಯ ಕೊಡು ಸುಖಿಪೆನೊ ಶ್ರೀಕೃಷ್ಣ” ಎಂಬ ಮಾತಿನ ಅರ್ಥವಂತೂ ನೆನೆದಷ್ಟು ಸವಿಯುಂಟು ಮಾಡುತ್ತದೆ. ಇಂತಹ ಕೃತಿಗಳು ರಸಾನುಭವಕಾರಿಯಾಗಿರುವುದು ವ್ಯಾಸರಾಜರ ವಿಶಿಷ್ಟ ಶೈಲಿಯು ಕಾರಣದಿಂದ; ಚಮತ್ಕಾರದ ಮಾತುಗಳಿಂದಲ್ಲವೆ?

ಭಾಗವತ ಗ್ರಂಥಗಲ್ಲಿ ಶ್ರೀಕೃಷ್ಣನ ನಾನಾ ವಿಧ ಲೀಲೆಗಳು ವರ್ಣಿತವಾಗಿರುವುದು. ಸರಿಯಷ್ಟೆ. ಅದನ್ನನುಸರಿಸಿ ವ್ಯಾಸರಾಜರು ರಚಿಸಿರುವ ಕೃಷ್ಣಲೀಲಾವಿಲಾಸ ಪದ್ಯಗಳಲ್ಲಿ ಮಧುರಭಾವ ಭಕ್ತಿಯೂ, ವಿಪ್ರಲಂಭ ಶೃಂಗಾರವೂ ರಸದ ಮಡುವಾಗಿರುವುದು. ‘ಕೇಳೆ ಯಶೋದೆ ನಿನ್ನ ಮಗನ ಊಟಿಯ’ ಎಂಬ ಕೀರ್ತನೆಯಲ್ಲಿ ಕೃಷ್ಣನ ಊಟಿ ಪ್ರಕರಣಗಳ ಪಟ್ಟಿ ಇದೆ. ಕೃಷ್ಣನನ್ನು ಲಾಲಿಸಿ, ಮುದ್ದಿಸಿ ಅಲಂಕರಿಸಿ ಅವನ ಚೇಷ್ಟೆಗಳನ್ನು ನೋಡಿ ಸುಖಿಸುವ ಸೌಭಾಗ್ಯವನ್ನು ಯಶೋದೆ ಅನುಭವಿಸಲು, “ಎಷ್ಟು ಜನ್ಮದಲಿ ಮಾಡಿದಳೊ ಗೋಪಿ ಶ್ರೀಕೃಷ್ಣನ ಲೀಲೆಯನು ನೆನೆದು ಹಿಗ್ಗುವ ಸುಕೃತ” ಎಂದು ವ್ಯಾಸರಾಜರು ಉದ್ಗರಿಸಿ ಕೃಷ್ಣನಿಗೆ ಯಶೋದೆ ಅಡಿಯಿಂದ ಮುಡಿವರೆಗೆ ಮಾಡಿದ ನಾನಾ ಅಲಂಕಾರಗಳನ್ನು ಚೇತೋಹಾರಿಯಾಗಿ ವರ್ಣಿಸಿರುವರು. “ಪನ್ನಗಶಯನ ಆನೆಯನಾಡು ಶ್ರೀಕೃಷ್ಣ! ಹೊನ್ನುತಾ ಹೊನ್ನುತಾ ಗುಬ್ಬಿ ಎಂದೆನುತ ಕರಗಳಲ್ಲಿ ತಾರಮ್ಮಯ್ಯನಾಡಿಸುತ ರನ್ನ ರಂಗಯ್ಯ ತೋಳಾಡು ಎಂಬುವ ಸುಕೃತ” ಎಂಬ ಚರಣದಲ್ಲಿ ಗ್ರಾಮೀಣ ಸಂಸ್ಕೃತಿಯ ಗಂಧಗಾಳಿ ಭಕ್ತಿಯ ಪರಿಮಳದೊಡನೆ ಮಿಳಿತವಾಗಿ ಮೈ ಮನಗಳನ್ನು ಪುಳಕಿಸುತ್ತದೆ. ಗ್ರಾಮೀಣ ಜನರು ಮಕ್ಕಳನ್ನಾಡಿಸುವ ಆಟಗಳ ಚಿತ್ರ ಇದರಲ್ಲಿದೆ.

(32ನೇ ಪುಟ ನೋಡಿ)

## ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು “ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ” ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ತ್ಯಾಗರಾಜರು ಹಾಗೂ ರಾಮನಾಮ ಮಹಿಮೆ

ಸದ್ಗುರು ತ್ಯಾಗರಾಜರು (ಕ್ರಿ.ಶ. 1767–1847) ಕವಿ, ಸಂತರು ಮತ್ತು ರಾಮಾಯಣ ವಾಗ್ಗೇಯಕಾರರು, ಬೋಧಕರು, ಗರ್ಭ ಭಾಗವತರು, ಮತ್ತು ಶ್ರೀರಾಮನ ಮಹಾ ಭಕ್ತರಾಗಿದ್ದರು. ಆಗಿನ ಕಾಲದಲ್ಲಿ ನಾಮಸಿದ್ಧಾಂತವು ಮೋಕ್ಷಕ್ಕೆ ಶಕ್ತಿಯುತವಾದ ವಿಧಾನವೆಂಬ ಭಕ್ತಿ ಹಾಗೂ ಧಾರ್ಮಿಕ ಚಳುವಳಿಯು ತಮಿಳುನಾಡಿನ ಕಾವೇರಿ ಬಯಲು ಪ್ರದೇಶದಲ್ಲಿ ಪುನರುಜ್ಜೀವನಗೊಂಡಿತು. ಈ ಚಳುವಳಿಯನ್ನು ಸ್ವಾಮಿ ನಾರಾಯಣತೀರ್ಥ, ಸದಾಶಿವ ಬ್ರಹ್ಮೇಂದ್ರ, ಶ್ರೀಧರ ವೆಂಕಟೇಶ್ವರದೀಕ್ಷಿತರು (ಅಯ್ಯಾವಾಳ್), ಬೋಧೇಂದ್ರ ಸದ್ಗುರು ಸ್ವಾಮಿ – ಮುಂತಾದವರು ಬೆಳೆಸಿದ್ದರು. ಈ ನಾಮ ಸಿದ್ಧಾಂತ ಚಳುವಳಿಯನ್ನು ತ್ಯಾಗರಾಜರು ಮುಂದುವರಿಸಿದರು. ಅವರು ರಾಮನಾಮವನ್ನು 96 ಕೋಟಿ ಸಲ ಜಪಿಸಿ ಸಿದ್ಧಿಯನ್ನು ಪಡೆದರು ಎಂಬುದನ್ನು ಇಲ್ಲಿ ಸ್ಮರಿಸಬಹುದು.

ನಾಮ ಮಹಾತ್ಮ್ಯ : ಹೆಸರಿನಲ್ಲಿ ಏನಿದೆ ಎನ್ನಬಹುದು. ಹೆಸರಿನಲ್ಲಿ ಎಲ್ಲವೂ ಇದೆ. ಹೆಸರೇ ಕೀರ್ತಿ. ಅದು ಒಂದು ಗುಣದ ಸಾರ. ವ್ಯಕ್ತಿಯ ಗುಣವಿಶೇಷವನ್ನು ತಿಳಿಸುವ ವಾಚಕ. (ಯಾನಿ ನಾಮಾನಿ ಗೌಣಾನಿ – ವಿಷ್ಣು ಸಹಸ್ರನಾಮ). ನಾಮಗಳು ಗುಣವನ್ನು ಆಧಾರವಾಗಿ ಉಳ್ಳ ಪದಗಳು ಅಥವಾ ಗೌಣಗಳು. ಭಗವಂತನ ಒಂದೊಂದು ನಾಮವೂ ಅವನ ಗುಣ, ಕೀರ್ತಿ, ಶಕ್ತಿ, ರೂಪ ಎಲ್ಲವನ್ನೂ ಸೂಚಿಸುವ ಮತ್ತು ಭಕ್ತನ ಹೃದಯದಲ್ಲಿ ನಿಲ್ಲಿಸುವಂತಹುದು (ಬಲಾತ್ ನಮಯತೀತಿ ನಾಮಃ). ಅವನ ಗುಣಗಳು ಅನಂತ. (ನಾಮಾನ್ಯನಂತಸ್ಯ ಯಶೋಂಕಿತಾನಿ – ಭಾಗವತ). ಭಗವಂತನ ನಾಮಗಳೂ ಅನಂತ. ಅಗ್ನಿ, ಇಂದ್ರ ಮುಂತಾದ ದೇವತೆಗಳ ಗುಣಗಳನ್ನೂ, ನಾಮಗಳನ್ನೂ ಸ್ತುತಿಸುವ ವೇದಗಳು ಮಾನವನ ಅತ್ಯಂತ ಪ್ರಾಚೀನವಾದ ಪ್ರಾರ್ಥನೆಗಳಾಗಿವೆ. ಉಪನಿಷತ್ತಿನಲ್ಲಿ ಬ್ರಹ್ಮನನ್ನು ಸತ್ಯ, ಜ್ಞಾನ, ಅನಂತನೆಂದು ಹೇಳಿದೆ. ಒಂದು ವಿಷಯದ ಅಥವಾ ವಸ್ತುವಿನ ಹೆಸರನ್ನು ಒಂದೇ ಸಮನಾಗಿ ಹೇಳುತ್ತಲೇ ಇದ್ದರೆ, ಆ ವಿಷಯ ಅಥವಾ ವಸ್ತುವಿನ ಮೇಲೆ ನಮ್ಮಲ್ಲಿ ಪ್ರೀತಿಯು ಬೆಳೆದು ಅದರಲ್ಲೇ ತಲ್ಲೀನತೆ ಉಂಟಾಗುತ್ತದೆ. ಹಾಗೆಯೇ ರಾಮ ನಾಮ ಶ್ರವಣದಿಂದ ನಾಮರೂಪವು ಹೃದಯದಲ್ಲಿ ನೆಲೆಗೊಂಡು ಪ್ರೇಮಭರಿತವಾಗುತ್ತದೆ. (ಸ್ಮರಣೇ ಸುಖಂ–ಜನರಂಜನಿ). 'ನಾನು ಜಪಿಸುವ ನಾಮದ ಅಕ್ಷರಗಳೇ ಈ ರೀತಿ ರೂಪು ತಾಳಿವೆಯೋ'ಎಂದು ಶ್ರೀರಾಮನನ್ನು ಒಂದು ಸ್ವಪ್ನ ದರ್ಶನದಲ್ಲಿ ಕೇಳಿದ್ದಾರೆ. (ನಾ ಜೀವಾಧಾರ–ಬಿಲಹರಿ). ನಮ್ಮ ಹೃದಯ ಮತ್ತು ಮನಸ್ಸಿನಲ್ಲಿ ಭಗವಂತನ ಸ್ವರೂಪವು ಭದ್ರವಾಗಿ ನೆಲೆಗೊಳ್ಳುವಂತಾಗಲು ಅವನ ನಾಮಗಳೇ ಕಾರಣ. ಅವನ ನಾಮಾಮೃತಪಾನವು ನಮ್ಮನ್ನು ಅವನ ಬಳಿಗೆ ಕರೆದೊಯ್ಯುವ ಸೋಪಾನಗಳು. (ವೆಂಕಟೇಶ ನಿನು–ಮಧ್ಯಮಾವತಿ).

ಭಕ್ತಿಮಾರ್ಗವು ಬೆಳೆದಂತೆ ಎಲ್ಲರೂ ಅದನ್ನು ಅನುಸರಿಸಲು ಸಾಧ್ಯವಾಗುವಂತಾಯಿತು. ಭಗವನ್ನಾಮವು 'ಪಾಮರಪಂಡಿತಪಾವನಕರ' ವಾದುದು (ಮಾಮವ ರಘುವರ–ಮಾಹುರಿ–ಮುತ್ತುಸ್ವಾಮಿ ದೀಕ್ಷಿತರು). ನಾಮಸಿದ್ಧಾಂತಿಗಳಿಗೆ ಉಪನಿಷತ್ತುಗಳು, ಮಹಾಭಾರತದ ಕೆಲವು ಭಾಗಗಳು, ಭಗವದ್ಗೀತೆ, ವಿಷ್ಣು ಸಹಸ್ರನಾಮ, ವಿಷ್ಣುಪುರಾಣ ಮತ್ತು ಭಾಗವತಗಳು ಆಧಾರ. 'ಅಸ್ಯ ಜಾನಂತೋ ನಾಮ ಚಿದ್ವಿವಕ್ತನ ಮಹಸ್ತೇ ವಿಷ್ಣೋ ಸುಮತಿಂ ಭಜಾಮಹೇ।' ಇತ್ಯಾದಿ ಋಗ್ವೇದದಲ್ಲಿ ಹೇಳಿರುವುದನ್ನೂ ಆಧರಿಸಿ ಅನೇಕರು ನಾಮ ಮಹಾತ್ಮ್ಯವನ್ನು ಕುರಿತು ಹಲವು ಗ್ರಂಥಗಳನ್ನು ರಚಿಸಿದ್ದಾರೆ.

ದ್ವಾಪರಯುಗವು ಮುಗಿದು ಕಲಿಯುಗವು ಪ್ರಾರಂಭವಾದಾಗ ನಾರದರು ತಂದೆಯಾದ ಬ್ರಹ್ಮನನ್ನು ಕಲಿಯನ್ನು ಹೇಗೆ ದಾಟುವುದೆಂದು ಕೇಳಿದರು. "ಪರಬ್ರಹ್ಮನಾದ ನಾರಾಯಣನ ನಾಮಜಪದಿಂದ ನೀನು ಕಲಿಯನ್ನು ದಾಟಬಹುದು"ಎಂದು ಬ್ರಹ್ಮನು ಹೇಳುತ್ತಾನೆ. (ಕಲಿಸಂತರಣೋಪನಿಷತ್) ಎಲ್ಲ ಯಜ್ಞಗಳಲ್ಲಿ ಜಪಯಜ್ಞವೇ ಭಗವಂತನಾಗಿದ್ದಾನೆ (ಯಜ್ಞಾನಾಂ ಜಪಯಜ್ಞೋಸ್ಮಿ–ಗೀತೆ). ನಾಮಘೋಷದಿಂದ ಭಗವಂತನಿಗೆ ಅಂತ್ಯತ ಹೆಚ್ಚಿನ ಸಂತೋಷವಾವಾಗುತ್ತದೆಂದು ತ್ಯಾಗರಾಜರು ಹೇಳಿದ್ದಾರೆ. (ನಾಮಘೋಷ ಜನಿತ ಸಂತೋಷ – ಪರಿಪಾಲಯಮಾಂ–ದರ್ಬಾರ್) ಜಪಯಜ್ಞದ ಮಹತ್ವವನ್ನು ವಿಷ್ಣು ಸಹಸ್ರನಾಮದ ಪೀಠಿಕೆಯಲ್ಲಿ ಹೇಳಿದೆ. ಯುಧಿಷ್ಠಿರನು ಭೀಷ್ಮನನ್ನು ಕೇಳುತ್ತಾನೆ–"ಎಲ್ಲಧರ್ಮಗಳಲ್ಲಿ ಅತ್ಯಂತ ಶ್ರೇಷ್ಠವಾದ ಧರ್ಮ ಯಾವುದು ? ಯಾವುದರ ಜಪದಿಂದ ಜನ್ಮ ಸಂಸಾರ ಬಂಧನದಿಂದ ಮುಕ್ತಿ ದೊರಕುತ್ತದೆ ?" – 'ಭಕ್ತಿಯಿಂದ ಭಗವಂತನನ್ನು ಸಹಸ್ರನಾಮಗಳಿಂದ ಸ್ತುತಿಸುವುದೇ ಅತ್ಯಂತ ಶ್ರೇಷ್ಠವಾದ ಧರ್ಮ'ಎಂದು ಉತ್ತರಿಸಿದ ಭೀಷ್ಮನು ವಿಷ್ಣು ಸಹಸ್ರನಾಮಗಳನ್ನು ಹೇಳಿದನು. (ಮಹಾಭಾರತ).

ಇತರ ಧರ್ಮಗಳು ಮತ್ತು ಯಜ್ಞಗಳಂತ ನಾಮ ಸ್ತೋತ್ರ ಅಥವಾ ಜಪಯಜ್ಞವು ಶ್ರೇಷ್ಠವೆಂಬುದನ್ನು ಆಚಾರ್ಯರು ವಿವರಿಸಿದ್ದಾರೆ. ಇದೊಂದು ಅಹಿಂಸಾಯಾಗ. ಇದಕ್ಕೆ ಜನಸಹಾಯವಾಗಲೀ, ಧನವಾಗಲೀ, ಗೊತ್ತಾದ ಸ್ಥಳ ಅಥವಾ ವಿಧೇಯಕವಾಗಲೀ, ವೇಳೆಯಾಗಲೀ ಇಲ್ಲ. ಕಲಿಯುಗದಲ್ಲಿ ನಾಮಸಂಕೀರ್ತನದಿಂದ




ತ್ಯಾಗರಾಜರು

ಡಾ॥ ವಿ. ಎಸ್.
ಸಂಪತ್ಕುಮಾರಾಚಾರ್ಯ

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹ ದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆ ಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**
ತಿ. ತಿ. ದೇ.

ಮೋಕ್ಷವು ಲಭ್ಯ. (ಧ್ಯಾಯನ್ ಕೃತೇ ಯಜನ್ ಯಜ್ಞೈಃ ತ್ರೇತಾಯಾಂ ದ್ವಾಪರೇ ಅರ್ಚಯನ್। ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ॥ – ವಿಷ್ಣು ಪುರಾಣ.)

ಜಪಯಾಗ ನಮ್ಮ ಪಾಪಗಳನ್ನು ಅಗ್ನಿಯು ಹತ್ತಿಯನ್ನು ಸುಟ್ಟುಬಿಡುವಂತೆ ನಾಶಮಾಡುತ್ತದೆ. ಕಲಿಯುಗದಲ್ಲಿ ನಾಮ ಒಂದೇ ನಮಗಿರುವ ಔಷಧ, ಅನ್ಯದಾರಿಯೇ ಇಲ್ಲ. ಭಗವನ್ನಾಮ ಸಂಕೀರ್ತನೆ ಯನ್ನು ಭಕ್ತಿಯಿಂದ ಮಾಡಿದರೆ ಸಾಕು. (ಕಲಿ ಯುಗದಲಿ ಹರಿನಾಮವ ನೆನೆದರೆ – ಪುರಂದರ ದಾಸರು; ಧ್ಯಾನವೇ ಪರಮೈನ – ಧನ್ಯಾಸಿ ; ಹರೇರ್ನಾಮ ಹರೇರ್ನಾಮ ಹರೇರ್ನಾಮೈವ ಕೇವಲಮ್। ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ॥ ನಾಮ ಒಂದೇ ಸಾಲದೇ – ಪುರಂದರದಾಸರು).

ಭಗವನ್ನಾಮ ಸಂಕೀರ್ತನೆ ಒಂದೇ ಸುಂದರ ವಾದುದು. ಅದು ಯಾವಾಗಲೂ ನವೀನ ಹಾಗೂ ಆಕರ್ಷಕ. ಅದೊಂದೇ ಮಾನವನ ದುಃಖವನ್ನು ಸಂಪೂರ್ಣವಾಗಿ ತೊಡೆದು ಹಾಕುತ್ತದೆ. ಭಗ ವನ್ನಾಮವಿರುವ ಲೇಖನ ಮತ್ತು ಪ್ರವಚನಗಳು ಮಾನವಕೋಟಿಯ ಪಾಪರಾಶಿಯನ್ನು ಕೊಚ್ಚಿ ಕೊಂಡು ಹೋಗುವ ಪ್ರವಾಹ. ಭಗವನ್ನಾಮ ವಿಲ್ಲದ ಸಾಹಿತ್ಯವು ಎಷ್ಟೇ ಸುಂದರವಾಗಿದ್ದರೂ ಕಾಗೆಗಳು ಸ್ನಾನಮಾಡುವ ಕೊಚ್ಚೆ ಗುಂಡಿಯ ಹಾಗೆ. ಅದು ಮುಕ್ತಾತ್ಮರಾದ ಹಂಸಗಳು ವಿಹ ರಿಸುವ ಮಾನಸ ಸರೋವರವಾಗುವುದಿಲ್ಲ ಎನ್ನು ತ್ತದೆ ಭಾಗವತ.

ಭಗವನ್ನಾಮವು ಸರ್ವಶಾಸ್ತ್ರಗಳ ಬೀಜಾಕ್ಷರ. (ಸರ್ವಶಾಸ್ತ್ರ ಬೀಜಂ ಹರಿನಾಮ ದ್ವ್ಯಕ್ಷರಃ). ಪ್ರಣವವು ಅವನ ವಾಚಕ. ಅದರ ಅರ್ಥವನ್ನು ಮನಸ್ಸಿನಲ್ಲಿಟ್ಟು ಅದರ ಜಪವನ್ನು ಮಾಡಬೇಕು. ಇದರಿಂದ ಎಲ್ಲಾ ಅಡಚಣೆಗಳೂ ನಿವಾರಣೆಯಾಗಿ ಮೋಕ್ಷಸಾಧನೆಯಾಗುತ್ತದೆ.

ಶಂಕರಾಚಾರ್ಯರಾದಿಯಾಗಿ ಎಲ್ಲರೂ ಭಕ್ತ ರಾಗಿದ್ದು ಅನೇಕ ಭಕ್ತಿ ಸ್ತೋತ್ರಗಳನ್ನು ರಚಿ ಸಿದ್ದಾರೆ. 17 ಮತ್ತು 18 ನೆ ಶತಮಾನಗಳಲ್ಲಿ ಅನೇಕ ಭಕ್ತರು, ವಿದ್ವಾಂಸರು ಮತ್ತು ಸಂನ್ಯಾಸಿ ಗಳು ನಾಮಸಿದ್ಧಾಂತವನ್ನು ಮತ್ತಷ್ಟು ಪುಷ್ಟೀಕ ರಿಸಿದರು. ಇವರಲ್ಲಿ ಪ್ರಮುಖರಾದ ಶ್ರೀಧರ ವೆಂಕ ಟೇಶರು ಭಗವನ್ನಾಮವನ್ನು ಕುರಿತು 60 ಶ್ಲೋಕ ಗಳಿರುವ ಆಖ್ಯಾಷಷ್ಠಿ ಮತ್ತು ಭಗವನ್ನಾಮ ಭೂಷಣ ಎಂಬ ಗ್ರಂಥಗಳನ್ನು ರಚಿಸಿದರು. ಇವರ ತರುವಾಯ ಬೋಧೇಂದ್ರಸದ್ಗುರುಸ್ವಾಮಿ ಯವರು ಈ ಸಿದ್ಧಾಂತವನ್ನು ವಿವರಿಸಿ ನಾಮಾ ಮೃತ ರಸಾಯನ, ನಾಮಾಮೃತ ರಸೋದಯ,

ನಾಮಾಮೃತ ಸೂರ್ಯೋದಯ ಮತ್ತು ಭಗವನ್ನಾಮಾಮೃತಾರ್ಣವ ಎಂಬ ನಾಲ್ಕು ಗ್ರಂಥಗಳನ್ನು ರಚಿಸಿದರು. ತ್ಯಾಗರಾಜರು ನಮ್ಮ ನೌಕಾಚರಿತ್ರೆಯಲ್ಲಿ ವಂದಿಸಿರುವ ಗುರು ಶ್ರೀರಾಮಕೃಷ್ಣಾನಂದರು ಬಹುಶಃ ನಾಮ ಸಿದ್ಧಾಂತದ ಪ್ರತಿಪಾದಕರಾಗಿದ್ದರೆನ್ನಬಹುದು; ದೇವತಾನಾಮ ಮಹಾತ್ಮ್ಯವೆಂಬ ಹಸ್ತಪ್ರತಿಗ್ರಂಥವು ಅವರ ಗ್ರಂಥ ಭಂಡಾರದಲ್ಲಿತ್ತೆಂಬುದು ಗಮನಾರ್ಹ. ರಾಮರಹಸ್ಯ, ಪೂರ್ವ ಮತ್ತು ಉತ್ತರರಾಮ ತಾಪನಿಗಳೆಂಬ ಮೂರು ಉಪನಿಷತ್ತುಗಳಲ್ಲಿ ಕೊಟ್ಟಿರುವ ನಾಮವು ರಾಮನಾಮ. ಯಾವ ನಾಮದಿಂದ ಕಲಿಯನ್ನು ದಾಟಬಹುದೆಂದು ನಾರದರು ಬ್ರಹ್ಮನನ್ನು ಕೇಳಿದಾಗ ಬ್ರಹ್ಮನು 'ರಾಮ, ಹರಿ ಮತ್ತು ಕೃಷ್ಣ'ಎಂದು ತಿಳಿಸಿದನು. (ನಾರದಃ ಪುನಃ ಪಪ್ರಚ್ಛ – ತನ್ನಾಮಕಿಮಿತಿ। ಸಹೋವಾಚ ಹಿರಣ್ಯಗರ್ಭಃ। ಹರೇರಾಮ ಹರೇರಾಮ ರಾಮರಾಮ ಹರೇ ಹರೇ। ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣಕೃಷ್ಣ ಹರೇಹರೇ ॥.

ರಾಮನಾಮದ ಹಿರಿಮೆ ಎಂತಹುದು? ರಾಮನಾಮವು ನಾರಾಯಣಾಷ್ಟಾಕ್ಷರೀ ಮತ್ತು ಶಿವ ಪಂಚಾಕ್ಷರೀ ಮಂತ್ರಗಳ ಸಾರವಾಗಿದೆ. ಈ ನಾಮದ ಎರಡು ಅಕ್ಷರಗಳನ್ನು ಇವೆರಡು ಮಂತ್ರಗಳಿಂದ ತೆಗೆದುಕೊಳ್ಳಲಾಗಿದೆ. (ಶ್ರೀರಾಮ ಮಂತ್ರರಾಜಸ್ಯ ಸಮ್ಯಗರ್ಥೋಯಮುಚ್ಯತೇ, ನಾರಾಯಣಾಷ್ಟಾಕ್ಷರೇಚ ಶಿವ ಪಂಚಾಕ್ಷರೀ ತಥಾ। ಸಾರ್ಥಕಾರ್ಣದ್ವಯಂ ರಾಮೋ ರಮಂತೇ ಯತ್ರ ಯೋಗಿನಃ ॥)

ರಾಮನಾಮವನ್ನು ಕುರಿತು ಉಪನಿಷತ್ತುಗಳು ಮತ್ತು ಇತರ ಗ್ರಂಥಗಳಲ್ಲಿ ವಿವರವಾಗಿ ಹೇಳಿರುವುದನ್ನು ತ್ಯಾಗರಾಜರು ಅರಿತಿದ್ದರು, ಆದ್ದರಿಂದ ಅವರಿಗೆ ರಾಮನಾಮವು 'ವೇದವರ್ಣನೀಯಮಾ ನಾಮಮುತೋ' ಮತ್ತು 'ವೇದಸಾರಮಾ ನಾಮಧೇಯಮು', ಇದು ನಾರಾಯಣ ಮತ್ತು ಶಿವ ಮಂತ್ರಗಳ ಸಾರವೆಂದು 'ಎವರನೀ' (ದೇವಾಮೃತವರ್ಷಿಣಿ – ಶಿವ ಮಂತ್ರಮುನಕು ಮಾ ಜೀವಮು, ಮಾಧವಮಂತ್ರಮುನಕು ರಾಜೀವಮು) ಎಂಬ ಕೃತಿಯಲ್ಲಿ ವಿವರಿಸಿದ್ದಾರೆ. ರಾಮ ಮಂತ್ರವು ತಾರಕಮಂತ್ರ. ಅದು ನಮ್ಮನ್ನು ಸಂಸಾರಸಾಗರದಿಂದ ದಾಟಿಸುತ್ತದೆ (ರಾಮ ಉತ್ತರ ತಾಪನೀ ಉಪನಿಷತ್). ರಾಮನು ತಾರಕ ನಾಮಧ್ಯೇಯ (ರಘುಪತೇ – ರಾಮ– ಶಹಾನ).

ದಶರಥನು ತನ್ನ ಹಿರಿಯ ಪುತ್ರನಿಗೆ ನಾಮಕರಣ ಮಾಡಿದಾಗ ಗುರು ವಶಿಷ್ಠರು ಅವನ ಮನಮೋಹಕ ರೂಪವನ್ನು ನೋಡಿ ರಾಮ ಎಂಬ ಹೆಸರಿಟ್ಟರು. (ಮೋಹನರಾಮ – ಮೋಹನ). ಅದು ಜಗತ್ತಿನಲ್ಲೇ ಅತ್ಯಂತ ಶುಭನಾಮವಾಯಿತು. (ರಾಮ ಇತ್ಯಭಿರಾಮೇಣ ವಪುಷಾ ತಸ್ಯಚೋದಿತಃ। ಜಗತ್ಪ್ರಥಮ ಮಂಗಳಮ್ ।–ಕಾಳಿದಾಸ), ರಾಮ ಎಂಬ ಹೆಸರು ಅವನಷ್ಟೇ ರಮಣೀಯವಾದುದು (ರಾಮಾಭಿರಾಮ ರಮಣೀಯನಾಮ –ದರ್ಬಾರ್). ರಾಮನಾಮವು ಜಯಕರನಾಮವಾಗಿದೆ. (ದೀನಜನಾವನ–ಭೂಪಾಲ) (ರಾಘವೋ ವಿಜಯಂ ದದ್ಯಾತ್ ಮಮ ಸೀತಾಪತಿಃ ಪ್ರಭುಃ।). ರಾಮನ ಮಹಿಮೆಯನ್ನು ವರ್ಣಿಸಲು ಸಾಧ್ಯವೇ? (ನಾಚಾಮ ಗೋಚರಮೇ– ಕೈಕವಶಿ). 'ವಾಲ್ಮೀಕಿ ಮುಂತಾದ ಋಷಿಗಳೂ ಇತರಕವಿಗಳೂ ನಿನ್ನನ್ನು ವರ್ಣಿಸಿದ್ದರೇನು? ನಿನ್ನ ಸದ್ಭಕ್ತರು ನಿನ್ನನ್ನು ವರ್ಣಿಸಿದ್ದರೇನು? ನಿನ್ನ ಮಹಿಮೆಯನ್ನು ಕುರಿತು ಹಾಡುವುದೇ ನನ್ನ ಜೀವನದ ಸೇವಾವೃತ್ತಿಯೆಂದು ನಾನು ತಿಳಿದಿರುವೆ' (ಏ ಪನಿಕೋ–ಅಸಾವೇರಿ) ಎಂದಿದ್ದಾರೆ. ಗುಣ ಮತ್ತು ಪ್ರಮಾಣದ ದೃಷ್ಟಿಯಿಂದ ತ್ಯಾಗರಾಜರ ಕೃತಿಗಳು ಶ್ರೀರಾಮನಿಗೆ ಸಂಬಂಧಿಸಿದ ಸಾಹಿತ್ಯದ ಶ್ರೇಷ್ಠ ಭಾಗವಾಗಿವೆ.

ತ್ಯಾಗರಾಜರಿಗೆ ಶ್ರೀರಾಮನು ಪರಬ್ರಹ್ಮ, ಆದಿ ಮಧ್ಯಾಂತರಹಿತ, ಅವಾಙ್ಮಾನಸಗೋಚರ, ಅಖಂಡರೂಪ, ನಾಮರೂಪ ರಹಿತ, ನಿರ್ಗುಣ ರೂಪ, ಸಚ್ಚಿದಾನಂದ, ಪುರಹರ ಸರೋಜ ಭವಕೇಶವಾದಿ ರೂಪ ಮತ್ತು ತ್ರಿಮೂರ್ತಿಗಳಿಗೂ ಮೇಲ್ಪಟ್ಟವನು. ಬ್ರಹ್ಮ, ವಿಷ್ಣು, ಶಿವರಿಗೆ ಅವರವರ ಕ್ಷೇತ್ರಗಳಲ್ಲಿ ಅವನೇ ಹಂಚಿಕೊಟ್ಟಿದ್ದಾನೆ. (ರಾಮ ನನ್ನು ಬ್ರೋವರ–ಹರಿಕಾಂಭೋಜಿ). ತ್ರಿಮೂರ್ತಿಗಳಿಗೆ ರಾಕ್ಷಸುರನನ್ನೇ ರಾಮಬಾಣದಿಂದ ರಕ್ಷಿಸಲು ಆಗಲಿಲ್ಲ. ರಾವಣನ ವಧೆಯಾದನಂತರ ಅವರು ಶ್ರೀರಾಮನನ್ನು ಸ್ತುತಿಸಿದರು, (ಏಮಿ ಜೋವ–ಸಾರಂಗ). ರಾಮನು ತ್ರಿಮೂರ್ತಿಗಳಿಗೆ ಪ್ರಭು (ಹರಿ ಪದ್ಮಜ ಶರ್ವೇಶೋ–ರಾಮ ಏವ ದೈವತಂ– ಕಲಹಂಸ). ಅವನು ಸತ್ವ, ರಜಸ್ಸು ಮತ್ತು ತಮಸ್ಸುಗಳಿಗೆ ಮೀರಿದವನು. ದೋಷರಹಿತ. (ಎಂದುಂಡಿ ವೆಡಲಿತಿವೋ – ದರ್ಬಾರ್) (ರಿಪೂಣಾಮಪಿ ವತ್ಸಲಃ ರಾಮಸ್ಸು ಪರದಾರಾನ್ಸ್ಯ ಚಕ್ಷುರ್ಭ್ಯಾಮಪಿ ನೇಕ್ಷತೇ।). ರಾಮನು ಮಾಡಿದ ಕೆಲಸಗಳನ್ನು ಅವನು ತಾನೇ ಮಾಡಲು ಸಾಧ್ಯವಿತ್ತು. ಅವನ ಮಾತುಗಳು ಅವನಿಂದಲೇ ಸಾಧ್ಯ. (ಯಥಾ ಸ ಏವಾರ್ಹತಿ ತತ್ರಭಾಷಿತಮ್). ಶ್ರೀರಾಮನು ಎಲ್ಲದರಲ್ಲೂ ಇದ್ದಾನೆ (ನಿಜಮುಗ ನೀ ಮಹಿಮಲು – ಶಹಾನ; ಪರಮಾತ್ಮುಡು – ವಾಗಧೀಶ್ವರಿ). ಅವನು ಒಳ್ಳೆಯದು ಮತ್ತು ಕೆಟ್ಟದ್ದು ಎಲ್ಲದರಲ್ಲೂ ಇದ್ದಾನೆ. (ಸಗುಣಮುಲೋ ವಿಗುಣಮುಲೋ ಸತತಮು), ಉಪನಿಷತ್ತಿನ ಮಹಾವಾಕ್ಯವಾದ 'ತತ್ತ್ವಮಸಿ' ಎಂಬುದರ ಅರ್ಥವೇ ರಾಮ (ತತ್ವಮೆರುಗ–ಗರುಡಧ್ವನಿ), ಗರುಡನು ವಿಷ್ಣುವಿನ ವಾಹನ. ಗರುಡ ಎಂದರೆ ಛಂದಸ್ ಅಥವಾ ವೇದ, ಉಪನಿಷತ್ತಿನ ಸತ್ಯವನ್ನು ಹೇಳಲು ತ್ಯಾಗರಾಜರು ರಾಗದ ಹೆಸರನ್ನು ಗರುಡಧ್ವನಿ ಎಂದು ಆರಿಸಿಕೊಂಡಿರುವುದು ಅರ್ಥಗರ್ಭಿತವಾಗಿದೆ.

ತ್ಯಾಗರಾಜರಿಗೆ ರಾಮನೇ ಇಷ್ಟದೈವ, ಪರಬ್ರಹ್ಮ, ಅವರಿಗೆ ರಾಮಾವತಾರವೇ ಪೂರ್ಣಾವತಾರ, (ರಘುಪತೇ ರಾಮ–ಶಹಾನ). ಅವನೇ ನರೋತ್ತಮ, ನರವರ (ರಾಮಚಂದ್ರಂ ಭಾವಯಾಮಿ – ದೀಕ್ಷಿತರು). ಏಕೆಂದರೆ ಅವನು ಸುಚರಿತ್ರ, ಶುಭಚರಿತ್ರ, ಸ್ತುತ್ಯಚರಿತ್ರ, ನಿರುಪಮಗುಣಶೀಲ, ಯಾವದೇವರ ದರ್ಶನಮಾಡಿದರೂ ಅಲ್ಲಿ ಅವರು ರಾಮನನ್ನೇ ಕಾಣುತ್ತಿದ್ದರು. ರಾಮನೇ ಅವರ ಕುಲದೈವ, ಕುಲಧನ. (ಇನ್ನಾಳ್ಳು–ನಾರಾಯಣಗೌಳ) ರಾಮನಾಮದಂತೆಯೇ ರಾಮಚರಿತವೂ ತಾರಕ ಚರಿತ್ರೆ ಮತ್ತು ತಾರಕ ಶುಭಕರ. (ಮರಿಯಾದ–ಶಂಕರಾಭರಣ; ಎಂದುಕು ದಯ–ತೋಡಿ; ಪಾಹಿ ಪಾಹಿ–ಸೌರಾಷ್ಟ್ರ). ಶ್ರೀರಾಮನು ಅನಂತಕಲ್ಯಾಣಗುಣಗಣನಾಗಿರುವುದರಿಂದ, ಅವನು ಭವ್ಯಗುಣ ಮಣಿಕೋಶ, ಸುಗುಣಮಣಿಕೋಶನಾಗಿರುವುದರಿಂದ ತ್ಯಾಗರಾಜರಿಗೆ ಇಷ್ಟದೈವ.

ರಾಮನಾಮವು ಕೇವಲ ಒಂದು ಉಪಾಯ ಮಾತ್ರವಲ್ಲ. ಅದೂ ಉಪೇಯವೂ ಆಗಿದೆ. ಇದನ್ನು ಕುರಿತು ಉಪೇಯನಾಮ ವಿವೇಕದಲ್ಲಿ ಉಪನಿಷತ್ ಬ್ರಹ್ಮರು ಈ ರೀತಿ ವಿವರಿಸಿದ್ದಾರೆ: "ಶ್ರೀರಾಮ ಏವ ನಾಮಸ್ಯಾನ್ನಾಭಿಧಾನಮುಪೇಯತಃ। ಉಪೇಯ ರೂಪಾವಸ್ಥಾನಂ ನಾಮಾರ್ಥ ಇತಿ ವಿಶ್ರುತಮ್ ॥ ಶ್ರೀರಾಮ ಏವ ನಾಮಸ್ಯಾತ್ ಶ್ರೀರಾಮಸ್ಯನಾಮ ಇತಿ ನಾಭಿಧಾನಂ ಕುತಃ? ನಾಮ್ನ ಉಪೇಯತ್ವಾತ್। ಇದೆಲ್ಲವನ್ನೂ ತ್ಯಾಗರಾಜರು ಅರಿತಿದ್ದರು. 'ನಾಮರೂಪಮೇ ಹೃದಯಮು ನಿಂಡಿ'(ಸ್ಮರಣೇ ಸುಖಮು –ಜನರಂಜನಿ)ಮತ್ತು 'ನಾ ಜನವರ್ಣರೂಪಮಾ' (ನಾಜೀವಾಧಾರ – ಬಿಲಹರಿ). ಎಂದು ರಾಮನಾಮವು ಉಪಾಯ ಮತ್ತು ಉಪೇಯನೆಂದು ಹೇಳಿದ್ದಾರೆ.

ಉಪಾಯನಾಮವು ಸ್ಥೂಲ, ಸೂಕ್ಷ್ಮ, ಬೀಜ ಮತ್ತು ತುರ್ಯ ಎಂಬ ನಾಲ್ಕು ಸ್ವರೂಪಗಳನ್ನು ಒಳಗೊಂಡಿದೆ. ಪ್ರತಿಯೊಂದೂ ಮೇಲಕ್ಕೆ ಹೋಗುವ ಹಂತಗಳು. ತುರ್ಯಾವಸ್ಥೆಯಲ್ಲಿ ಭಕ್ತನು ಭಗವಂತನಲ್ಲಿ ಲೀನನಾಗುತ್ತಾನೆ. ಮೊದಲಿನ ಮೂರೂ ದ್ವೈತ. ಕೊನೆಯದು ಅವನಲ್ಲಿ ಒಂದಾಗುವುದು.

ರಾಮನಾಮ ಸಿದ್ಧಾಂತದ ಪ್ರತಿಪಾದಕರಾಗಿದ್ದ ತ್ಯಾಗರಾಜರು ತಮ್ಮ ನಾಲಿಗೆಯು ಯಾವಾಗಲೂ

ರಾಮನಾಮವನ್ನು ಜಪಿಸುತ್ತಿರುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿರುವುದು ಗಮನಾರ್ಹ. (ಮಾನಸಮುನ ನೀನಾಮಮು ಮಾರುಮಾರು ಬಲ್ಕುನು ದಯಚೇಯುಮು–ಶ್ರೀರಘುವರ–ದೇವಗಾಂಧಾರಿ). ಮಂತ್ರರಾಜನಂತಿರುವ ರಾಮನಾಮವು ಸದಾ ಅವರ ನಾಲಿಗೆಯಲ್ಲಿ ರಾಜಿಸುತ್ತಿತ್ತು. (ಊರಕೇ ಗಲ್ಗುನಾ–ಶಹಾನ). ಅವರು ರಾಮನಾಮದೊಂದಿಗೇ ಜನ್ಮ ತಾಳಿ ಅದರ ಜಪವನ್ನು ನಿರಂತರ ಮುಂದುವರಿಸಿದರು (ಪಾಹಿಮಾಂ ಹರೇ–ದಿವ್ಯನಾಮ ಕೀರ್ತನೆ). ಶಿವನು ರಾಮನಾಮದ ಮಹಿಮೆಯನ್ನು ಅರಿತು ಅದರ ಸವಿಯನ್ನು ಕಂಡವನು. ಇದು ಅವರ ಕೃತಿಗಳಿಗೆಲ್ಲಾ ಆಧಾರತತ್ತ್ವವಾಗಿದೆ. ತ್ಯಾ ಗ ರಾ ಜ ನು ತ ನಿ ಇತ್ಯಾದಿ ಅಂಕಿತಗಳನ್ನು ಕವಿತ್ಯಾಗರಾಜನಿಂದ ಮತ್ತು ಶಿವನಿಂದ ಸ್ತುತಿಸಲ್ಪಟ್ಟ ರಾಮ ಎಂಬ ಎರಡು ಅರ್ಥಗಳಿರುವಂತೆ ಬಳಸಿದ್ದಾರೆ, 'ರಾಮನಾಮವನ್ನು ಜಪಿಸುವುದರಿಂದ ದೊರಕುವ ಆನಂದವನ್ನು ವರ್ಣಿಸಲು ಸಾಧ್ಯವೇ ? ಯಾರಿಗೆ ಅದರ ಗುಣ ಮತ್ತು ಮಹಿಮೆಯು ತಿಳಿವಿದೆ ? ನಿಜವಾದ ಮಹಾಭಕ್ತರು ಮಾತ್ರ ಅರಿತಿದ್ದಾರೆ. ರಾಗ ಸುಧಾರಸವನ್ನು ರಾಮನಾಮವೆಂಬ ಕಲ್ಲು ಸಕ್ಕರೆಯೊಡನೆ ಸವಿದು ಆನಂದಪಡುವ ಶಂಕರನಿಗೆ ಮಾತ್ರ ತಿಳಿದಿದೆ' (ಇಂತಸೌಖ್ಯಮನಿ – ಕಾಪಿ; ರಾಮನಾಮಪಾಯಸಕ್ಕೆ – ಪುರಂದರದಾಸರು). ರಾಮನಾಮದ ಮಹಿಮೆಗೆ ಶಿವನೇ ಸಾಕ್ಷಿ. (ಕನಕನ ರುಚಿರ–ವರಾಳಿ). ರಾಮತಾರಕಮಂತ್ರವನ್ನು ಈ ಪ್ರಪಂಚದ ಅಜ್ಞಾನಿಗಳಿಗೆ ಉಪದೇಶಿಸಿ ಅವರು ಸಂಸಾರವನ್ನು ದಾಟುವಂತೆ ಮಾಡುತ್ತಾನೆ. (ವಾಡೇರಾ–ಪಂತುವರಾಳಿ), ನಾಮಕೀರ್ತನೆಯು ಯಾಂತ್ರಿಕವಾದುದಲ್ಲ. ಅದರ ಅರ್ಥವನ್ನು ತಿಳಿದು ಭಕ್ತಿಯಿಂದ ಧ್ಯಾನಿಸಬೇಕು (ತೆಲಿಸಿ ರಾಮಚಿಂತನತೋ ನಾಮಮು–ಪೂರ್ಣಚಂದ್ರಿಕ) ಈ ಕೃತಿಯ ಪಲ್ಲವಿಯ ಭಾವವು ಉಪನಿಷತ್ ಬ್ರಹ್ಮರ ಗ್ರಂಥದಲ್ಲಿರುವ ಈ ಶ್ಲೋಕದಲ್ಲಿ ಕಂಡುಬರುತ್ತದೆ: ಯ ಇತ್ಥಂ ರಾಮನಾಮಾರ್ಥಂ ಜ್ಞಾತ್ವಾನಾಮ ಸ್ಮರೇತ್ ಸದಾ। ಸ ಯಾತಿ ಪರಮಾದ್ವೈತ ಮಹಾಸಾಮ್ರಾಜ್ಯ ವೈಭವಮ್ ॥.

ಪದ್ಮಪುರಾಣದಲ್ಲಿ ನಾಮಕೀರ್ತನೆ ಮಾಡುವ ಭಕ್ತರು ನಾಮ ಅಪರಾಧಗಳನ್ನು ಮಾಡಕೂಡದೆಂದು ಹೇಳಿದೆ. ಅವುಗಳು ಸಾಧುನಿಂದೆ, ಶಿವ ಮತ್ತು ವಿಷ್ಣುವಿನಲ್ಲಿ ಭೇದ, ಗುರುನಿಂದೆ, ವೇದ ಮತ್ತು ಶಾಸ್ತ್ರಗಳ ಅವಹೇಳನ, ಭಗವನ್ನಾಮವು ಒಂದು ಉತ್ಪ್ರೇಕ್ಷೆ ಎಂದು ಭಾವಿಸುವುದು, ನಾಮದ ಜಪದ ಬಲದಿಂದ ಪಾಪಮಾಡುವುದು, ಮನಸ್ಸು ಶುದ್ಧಿಯಿಲ್ಲದಿರುವುದು, ಅಸತ್ಯ ನುಡಿಯುವುದು, ಕದಿಯುವುದು, ಜಿತೇಂದ್ರಿಯನಾಗಿಲ್ಲದಿರುವುದು, ದಾನಗಳನ್ನು ಸ್ವೀಕರಿಸುವುದು, ಎಲ್ಲ ಕರ್ಮ ಮತ್ತು ಧರ್ಮಗಳನ್ನು ತ್ಯಜಿಸುವುದು, ಆಸಕ್ತಿಯಿಲ್ಲದ ಅಧಮರಿಗೆ ನಾಮವನ್ನು ಉಪದೇಶಿಸುವುದು, ಅಹಂಕಾರ ಮತ್ತು ಮಮಕಾರಗಳಿಂದ ಕೂಡಿರುವುದು, ಈ ಅಪರಾಗಳ ವಿಷಯವನ್ನು ತ್ಯಾಗರಾಜರು 'ಸುಖಿ ಎವರೋ' – (ಕಾನಡ) ಎಂಬ ಕೃತಿಯಲ್ಲಿ ಹೇಳಿದ್ದಾರೆ.

ರಾಮನಾಮ ಜಪವು ಮನಸ್ಸನ್ನು ನಿರ್ಮಲಗೊಳಿಸುತ್ತದೆ. (ಜ್ಞಾನಮೊಸಗರಾದ – ಷಡ್ವಿಧಮಾರ್ಗಿಣಿ). ಆದ್ದರಿಂದಲೇ ಅದು ಪರಮಪಾವನ ನಾಮವಾಗಿದೆ. (ರಮಾರಮಣ–ವಸಂತಭೈರವಿ; ದಾಶರಥೀ ನೀ ಋಣಮು–ತೋಡಿ) ರಾಮನಾಮದಲ್ಲಿ ನಿಜಪ್ರೇಮವಿಲ್ಲದ ಬದುಕು ನಿರರ್ಥಕ. (ಪಾಹಿ ಪರಮಾತ್ಮ – ವರಾಳಿ). ರಾಮನಾಮವು ಸಕಲ ಐಶ್ವರ್ಯವಾಗಿದ್ದು. ನಮ್ಮನ್ನು ಸರಿಯಾದ ಮಾರ್ಗದಲ್ಲಿ ಭಗವಂತನಲ್ಲಿಗೆ ಕರೆದೊಯ್ಯುತ್ತದೆ (ವಂದನಮು – ಶಹಾನ).

'ರಾಮನಾಮಮು ಜನ್ಮರಕ್ಷಕ ಮಂತ್ರಮು'

---

# ಕಪಿಲೇಶ್ವರಸ್ವಾಮಿ ದೇವಾಲಯ

## ತಿರುಪತಿ

ತಿರುಪತಿಯಿಂದ ತಿರುಮಲೆಗೆ ಹೊರಡುವ ಹಾದಿಯಲ್ಲಿ ತಿರುಪತಿಯ ಉತ್ತರ ಭಾಗದಲ್ಲಿ ಬೆಟ್ಟದ ತಪ್ಪಲಿನಲ್ಲಿರುವ ಸುಂದರ ಪ್ರಶಾಂತ ದೇವಾಲಯ. ಇಲ್ಲಿನ ದೊಡ್ಡ ಜಲಪಾತ ಮಳೆಗಾಲದಲ್ಲಿ ತುಂಬಿ ಧುಮುಕುವುದು. ಆಳ್ವಾರ್ ತೀರ್ಥವೆಂದೂ ಹೆಸರಿರುವ ಇಲ್ಲಿ ಕಪಿಲ ಮಹರ್ಷಿ ಪೂಜಿಸಿದ ಈಶ್ವರ ಲಿಂಗವಿದ್ದು ಸಕಲ ಹಿಂದೂಗಳನ್ನೂ ಏಕತ್ರ ಆಕರ್ಷಿಸುತ್ತದೆ. ತಿರುಪತಿಯಿಂದ ನಡೆದೂ ಹೋಗಬಹುದು. ಸ್ಥಳೀಯ ವಾಹನ ಸೌಕರ್ಯವೂ ಉಂಟು.

## ಆಲಯ ಕಾರ್ಯಕ್ರಮ ವಿವರ

| | |
|---|---|
| ಸುಪ್ರಭಾತ | ಬೆಳಗ್ಗೆ 5–00 ರಿಂದ 5–30 ವರೆಗೆ |
| ಸರ್ವದರ್ಶನ | ,, 5–30 ರಿಂದ 9–30 ವರೆಗೆ |
| ಅಭಿಷೇಕ | ,, 9–30 ರಿಂದ 10–30 ವರೆಗೆ |
| ಮೊದಲ ಬಲಿ, ಘಂಟೆ | ,, 10–30 ರಿಂದ 10–45 ವರೆಗೆ |
| ಸರ್ವದರ್ಶನ | ,, 10–45 ರಿಂದ 11–30 ವರೆಗೆ |
| ಎರಡನೇ ಬಲಿ, ಘಂಟೆ | ,, 11–30 ರಿಂದ 11–45 ವರೆಗೆ |
| ಸರ್ವದರ್ಶನ | 11–45 ರಿಂದ ಮದ್ಯಾಹ್ನ 4–00 ವರೆಗೆ |
| ಅಭಿಷೇಕ (ಆರ್ಜಿತ) | ಮಧ್ಯಾಹ್ನ 4–00 ರಿಂದ 4–30 ವರೆಗೆ |
| ಅರ್ಚನೆ (ಆರ್ಜಿತ) | ,, 4–30 ರಿಂದ 5–30 ವರೆಗೆ |
| ರಾತ್ರಿ ಘಂಟೆ | ಸಂಜೆ 5–30 ರಿಂದ 5–45 ವರೆಗೆ |
| ಸರ್ವದರ್ಶನ | ,, 5–45 ರಿಂದ 6–00 ವರೆಗೆ |
| ದೀಪಾರಾಧನೆ | ,, 6–00 ರಿಂದ 6–30 ವರೆಗೆ |
| ಸರ್ವದರ್ಶನ | ,, 6–30 ರಿಂದ 7–30 ವರೆಗೆ |
| ಏಕಾಂತಸೇವೆ | ರಾತ್ರಿ 7–30 ರಿಂದ 8–00 ವರೆಗೆ |

ಆರ್ಜಿತಸೇವಾಕಾಲದಲ್ಲಿ ರೂ ॥ 1–00 ಶುಲ್ಕದಿಂದ ಒಬ್ಬರು ದರ್ಶನಕ್ಕೆ ಅನುಮತಿಸಲ್ಪಡುವರು.

ಪೇಷ್ಕಾರ್.

## ಯುವವಾಣಿ

# ಅನ್ನಮಯ್ಯ ಚಿತ್ರಿಸಿದ ಹನುಮಂತ

ಆಂಧ್ರ ವಾಗ್ಗೇಯಕಾರರಲ್ಲಿ ತಾಳ್ಳಪಾಕ ಅನ್ನಮಯ್ಯ ಪದಕವಿತಾಪಿತಾಮಹ ಎಂದು ಪ್ರಸಿದ್ಧನಾದವ. ಈತ ಕಡಪ ಜಿಲ್ಲೆಯ ರಾಜಂಪೇಟೆ ತಾಲೂಕಿನ ತಾಳ್ಳಪಾಕ ಗ್ರಾಮದಲ್ಲಿ 1408 ರಲ್ಲಿ ಹುಟ್ಟಿ 1503 ರ ವರೆಗೆ ಜೀವಿಸಿದ ಮಹಾಪುರುಷ. ಹುಟ್ಟಿದ ಲಾಗಾಯತು ಭಕ್ತನಾಗಿದ್ದ, ತನ್ನ ಜೀವನವನ್ನು ಶ್ರೀವೆಂಕಟೇಶ್ವರ ಸ್ವಾಮಿ ಸಂಕೀರ್ತನೆಗೆ ಅರ್ಪಣೆ ಮಾಡಿಕೊಂಡಾತ. ಹುಟ್ಟು ನಂದವರಿಕ ವಂಶದಲ್ಲಿಯಾದರೂ, ತಿರುಮಲೆಯನ್ನು ಸೇರಿ ಘನವಿಷ್ಣುವಿನಿಂದ ಪಂಚ ಸಂಸ್ಕಾರಗಳನ್ನು ಹೊಂದಿ ವೈಷ್ಣವನಾದ. ಆದಿವಣ್ ಶಠಗೋಪಯತಿಗಳ ಬಳಿ ವೇದ ವೇದಾಂತಗಳನ್ನು ಕಲಿತು, ದಿನಕ್ಕೆ ಒಂದರಂತೆ ಸ್ವಾಮಿಯ ಬಗ್ಗೆ ಮೂವತ್ತೆರಡು ಸಾವಿರ ಕೀರ್ತನೆಗಳನ್ನು ಬರೆದ.

ಅನ್ನಮಯ್ಯನದು ಭಕ್ತಿಪಂಥ. ತಾನು ತೃಪ್ತನಾಗುವುದೆ ಅಲ್ಲದೆ ತನ್ನಂತಹವರನ್ನೂ ತೃಪ್ತಿಪಡಿಸಲು ಸಂಕೀರ್ತನೆಗಳನ್ನು ಬರೆದ. ಭಕ್ತಿ ಪಂಥದ ಪ್ರಚಾರಕ್ಕಾಗಿ ವಿಸ್ತೃತವಾದ ದೇಶಾಟನೆಯನ್ನೂ ಮಾಡಿದ. ದಿವ್ಯದೇಶಗಳ ಮೂರ್ತಿಗಳನ್ನು ಮನದುಂಬಿ ಹಾಡಿದ. ಈತನ ಸಂಕೀರ್ತನೆಗಳಲ್ಲಿ ವಿಠಲ, ನರಸಿಂಹ, ಚೆನ್ನಕೇಶವ, ರಾಮ ಮೊದಲಾದವರೆಲ್ಲ ವೆಂಕಟೇಶ್ವರ ಸ್ವಾಮಿಯ ಪ್ರತಿರೂಪರೇ. ಇಂತಹ ಧನ್ಯಜೀವಿಯ ರಚನೆಗಳಲ್ಲಿ ಹನುಮಂತನ ಬಗ್ಗೆ ಹಲವಾರು ಕೀರ್ತನೆಗಳಿವೆ.



ಅನ್ನಮಯ್ಯ ಬರೆದ ಹನುಮತ್ಸಂಕೀರ್ತನೆಗಳಲ್ಲಿ ಸಂಸ್ಕೃತ ತೆಲುಗು ಭಾಷೆಗಳೆರಡರವೂ ಇವೆ. ಮಿಕ್ಕಂತೆ ಅತನ ಈ ಕೀರ್ತನೆಗಳನ್ನು ನಾಲ್ಕು ಕ್ಷೇತ್ರ ನಾಮಗಳಿಂದ ಗುರುತಿಸಬಹುದು. ಅವೆಂದರೆ; ತಿರುಮಲೆ–ತಿರುಪತಿಯ ಹನುಮತ್ಸಂಕೀರ್ತನೆಗಳು, ಮಂಗಾಂಬುಧಿ, ಕಲಶಾಪುರ, ಮತಂಗಾದ್ರಿಯ ಹನುಮತ್ಸಂಕೀರ್ತನೆಗಳು.

ತಿರುಮಲೆ–ತಿರುಪತಿಗಳಲ್ಲಿ ಆಂಜನೇಯ ವಿಗ್ರಹಗಳು ಹೆಚ್ಚಿಗೆ ಕಂಡುಬರುತ್ತವೆ. ಅವುಗಳಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿ ಸನ್ನಿಧಿಯ ಬೇಡಿ ಆಂಜನೇಯ ಪ್ರಸಿದ್ಧ, ಶ್ರೀ ವೆಂಕಟೇಶ್ವರ ವಿಷ್ಣುವೇ ಎನ್ನಲು ಇದೊಂದು ಆಧಾರ. ವಿಷ್ಣು ಆಲಯಗಳಲ್ಲಿ ಆಂಜನೇಯ ಕೈಜೋಡಿಸಿ ನಮಸ್ಕಾರ ಭಂಗಿಯಲ್ಲಿ ಸಾಕ್ಷಾತ್ಕರಿಸುತ್ತಾನೆ. ಇತರತ್ರ ಹಲವಾರು ಭಂಗಿಗಳಲ್ಲಿರಬಹುದು.

ಆಂಜನೇಯನು ಬೆಟ್ಟದ ಮೇಲೆ ನಿರ್ಲಕ್ಷ್ಯದಿಂದ ತಿರುಗಾಡುತ್ತಿದ್ದಾಗ ಅವನ ಕೈಗಳಿಗೆ ಬೇಡಿಯನ್ನು ತೊಡಿಸಲು ಸ್ವಾಮಿ ಅಜ್ಞೆ ಮಾಡಿದ್ದರಿಂದ ಈತನನ್ನು ಬೇಡಿ ಆಂಜನೇಯ ಎನ್ನುತ್ತಾರೆ. ಬೇಡಿ ಎನ್ನುವ ಪದ ಪ್ರಾರ್ಥಿಸಿ ಎಂಬ ಅರ್ಥದಲ್ಲಿ ಪ್ರಚಲಿತ. ಸ್ವಾಮಿ ಸಂದರ್ಶನ ಸುಲಭವಾಗಿ ಆಗಲು ಆಂಜನೇಯನನ್ನು ಬೇಡುವುದು ತಿರುಮಲೆಯಲ್ಲಿ ಆಚಾರ. ಮೊದಲು ಆಂಜನೇಯನನ್ನು ಪ್ರಾರ್ಥಿಸಿ, ಪುಷ್ಕರಿಣಿಯಲ್ಲಿ ಸ್ನಾನ ಮಾಡಿ ವರಾಹಸ್ವಾಮಿಗೆ ನಮಸ್ಕರಿಸಿ, ನಂತರ ವೆಂಕಟೇಶನನ್ನು ನೋಡಹೋಗುವುದು ಸಂಪ್ರದಾಯ. ತನಗಿಂತ ತನ್ನ ಭಕ್ತರೇ ಹಿರಿಯರು ಎಂಬುದನ್ನು ಸಾರಿಹೇಳುವಂತೆ ದೇವರು ಆಂಜನೇಯನನ್ನು ಎತ್ತರದ ಸ್ಥಳದಲ್ಲಿ ನಿಲ್ಲಿಸಿದಂತಿದೆ.



.........ಶ್ರೀ ವೆಂಕಟೇಶುನಕು
ದಟುಕುನ ಬಂಟುವೈ ಧರಣಿ ನಿಲಚಿತಿವಿ
9–233

* * * *

ಓ ವೆಂಕಟಾಚಲಪತಿ
ಪಾದಸರೋರುಹ ಪಾಲಕುಡಾ 11–1–31

* * * *

ಶ್ರೀ ವೆಂಕಟಪತಿ
ಕಾಮೇಟಿ ಬಂಟುವೈತಿವಿ ಹನುಮಂತರಾಯ
11–1–138.

ಬೆಟ್ಟವನ್ನು ಹತ್ತುವ ಭಕ್ತರು ತಲೆಯೇರುಗುಂಡಿನ ಸಮೀಪದಲ್ಲಿ ಆಂಜನೇಯನನ್ನು ದರ್ಶಿಸಬಹುದು. ಬೆಟ್ಟವನ್ನು ಏರಿ ಇಳಿಯುವ ಭಕ್ತರು ತಮ್ಮ ಕಾಲುನೋವು ಕೀಲುನೋವುಗಳನ್ನು ಕಳೆದುಕೊಳ್ಳಲು ಈ ಗುಂಡಿಗೆ ಮೊಣಕಾಲ ಚಿಪ್ಪು ತಗುಲಿಸಿದರೆ ಅಲ್ಲಿರುವ ಸ್ವಾಮಿ ನೋವನ್ನು ಕಳೆಯುವನೆಂಬುದು ನಂಬಿಕೆ.

ಬೆಟ್ಟದ ಮೇಲಿನ ಬೇಡಿ ಆಂಜನೇಯನೇ ಅಲ್ಲದೆ, ತಿರುಪತಿಯ ಕೋದಂಡರಾಮಾಲಯ, ಗೋವಿಂದರಾಜಸ್ವಾಮಿ ಆಲಯಗಳ ಸನ್ನಿಧಿಯಲ್ಲಿ ಆಂಜನೇಯ ಕಾಣುತ್ತಾನೆ:

**ಡಾ॥ ಕೆ. ಸರ್ವೋತ್ತಮನ್**

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಮಗಟಿ ಮೀ ಗಲ ಹನುಮಂತರಾಯ
ದಿಗುವ ಪಟ್ಟಣಮುಲೋನಿ ದೇವ ಹನುಮಂತ
ತಮಿ ಕೋಡ ದಾಸುಲನು ತಪ್ಪಕ ಕಾಚೇನನಿ
ಅಮರನಭಯಮಿಚ್ಚಿನ ಹನುಮಂತುಡಾ
7–16.

ಮಂಗಾಂಬುಧಿ ಎಂಬುದು ಬಹುಶಃ ಮಂಗಾಪುರವೇ ಆಗಿರಬೇಕು. ಆದರೆ ಅಲಮೇಲು ಮಂಗಾಪುರ, ಶ್ರೀನಿವಾಸ ಮಂಗಾಪುರಗಳಲ್ಲಿ ಇದು ಯಾವುದು ಎಂಬ ಪ್ರಶ್ನೆಯುಂಟಾಗುವುದು. ತಾಳ್ಲಪಾಕ ವಂಶಸ್ಥರು ಶ್ರೀನಿವಾಸ ಮಂಗಾಪುರದ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿದರು. ಹಾಗಾಗಿ ಇಲ್ಲಿನ ಆಂಜನೇಯನನ್ನು ಕುರಿತೇ ಅನ್ನಮಯ್ಯ ಹಾಡಿರಬೇಕು. ಆದರೆ ಶ್ರೀನಿವಾಸಮಂಗಾಪುರದಲ್ಲಿ ಈಗ ಆಂಜನೇಯನ ಗುಡಿಯಿಲ್ಲ. ಚಂದ್ರಗಿರಿಯ ಮೂಲಕ ತಿರುಮಲೆಯನ್ನು ಸೇರುವವರು ಶ್ರೀನಿವಾಸಮಂಗಾಪುರದ ದೇವಾಲಯವನ್ನು ನೋಡಿಕೊಂಡು ಶ್ರೀವಾರಿ ಮೆಟ್ಟುವಿನ ಮೂಲಕ ಬೆಟ್ಟವನ್ನೇರುವುದು ಇಂದೂ ಸಂಪ್ರದಾಯವೇ ಆಗಿದೆ. ಆದ್ದರಿಂದ ಅನ್ನಮಯ್ಯ ಕೀರ್ತಿಸಿದ್ದು ಇಲ್ಲಿನ ಹನುಮಂತನನ್ನೇ ಎನ್ನ ಬಹುದು.

ಅಲ ಶ್ರೀವೆಂಕಟಪತಿಯುಂಡನೆ ಮಂಗಾಂಬುಧಿ
ನಿಲಯಪು ಹನುಮಂತುನಡಿಗಿತಿಗಾ
11–1–163

* * * *

ಬಲಿಮಿ ಶ್ರೀವೆಂಕಟೇಶುಕು ಬಂಟೈ
ಮಂಗಾಂಬುಧಿ 11–1–167

* * * *

ಮಂಗಾಂಬುನಿಧಿ ಹನುಮಂತ ನೀಕೇಕಾಲಮು
ಚೆಂಗಟ ಶ್ರೀ ವೆಂಕಟಾದ್ರಿ ಶ್ರೀರಾಮುರಕ್ಷ
11–1–164.

ಇತ್ಯಾದಿ ವಾಕ್ಯಗಳನ್ನು ಸಾಕ್ಷಿಯೆನ್ನಬಹುದು.

ಹಂಪೆಯಲ್ಲಿನ ಮಾಲ್ಯವಂತಗಿರಿಗೆ ಎದುರಿಗಿರುವ ಬೆಟ್ಟದ ದೇವರೇ ಕಲಶಾಪುರದ ಆಂಜನೇಯನೆಂಬುದು ರಾಳ್ಳಪಲ್ಲಿಯವರ ಭಾವನೆ. ಶ್ರೀನಾಥನು 'ಕಳಸಾಪುರಪ್ರಾಂತ ಕದಳೀ ವನಾಂತರ ದ್ರಾಕ್ಷಾಲತ ಫಲಸ್ತಬಕಮುಲನು' ಎಂದು ಈ ಪ್ರಾಂತ್ಯವನ್ನೇ ವರ್ಣಿಸಿರಬೇಕು ಎಂದು ತಿಳಿದರು ಅವರು.

ಅನಂತಪುರದ ಗುಂತಕಲ್ಲಿನ ಸಮೀಪದ ಕಶಾಪುರವೇ ಕಲಶಾಪುರ ಎಂದು ಹಲವರು ಭಾವಿಸುತ್ತಾರೆ. ಇಲ್ಲಿಯೂ ಆಂಜನೇಯನಿದ್ದಾನೆ. ಈತ ನೆಟ್ಟಿಕಲ್ಲು ಆಂಜನೇಯ ಎಂಬುದಾಗಿ ಪ್ರಸಿದ್ಧ. ಅನ್ನಮಯ್ಯ ಪೆನುಗೊಂಡೆಯ ಪ್ರಭುಗಳ ಬಳಿ

ಹಲಕಾಲವಿದ್ದದ್ದು, ಅನಂತಪುರದ ಬಳಿ ನೆಟ್ಟಿಕಲ್ಲು ಆಂಜನೇಯನಿರುವುದು – ಇವರ ಊಹೆಗೆ ಆಧಾರಗಳು. ಆದರೆ ಕಶಾಪುರಸ್ವಾಮಿಯ ಆಕಾರದಿಂದ ಬೇರೆಯಾದ ವರ್ಣನೆಗಳು ಅನ್ನಮಯ್ಯನ ಕಲಶಾಪುರ ಆಂಜನೇಯನಲ್ಲಿ ಕಾಣಿಸುತ್ತವೆ. ಕಲಶಾಪುರದ ಆಂಜನೇಯ ವೀರ ರಸಾವತಾರ ಮೂರ್ತಿ.

ಕುಂದಕ ವೀರರಸಮೇ ಕುರಿಸೇಟಿವಿ ಮೊಗಮು
ಪೊಂದಗುವಾಡು ಕಲಶಾಪುರ ಹನುಮಂತುಡು
11–1–211

ಮತಂಗಾದ್ರಿ ಬಳ್ಳಾರಿಯ ಹೊಸಪೇಟೆಯ ಬಳಿಯದು. ಮತಂಗಾದ್ರಿಯ ಹನುಮಂತ ರೌದ್ರಾಕಾರದವನು.

ನಿಂಚಿನಾಡು ರೌದ್ರಮು ನಿಡುಪಾಟಿ
ದವಡಲ 9–12

ಅನ್ನಮಯ್ಯ ಹಾಡಿದ ನಾಲ್ಕು ಕ್ಷೇತ್ರಗಳ ಹನುಮತ್ಸಂಕೀರ್ತನೆಗಳಲ್ಲಿ ಆಕಾರ ವರ್ಣನೆಗೇ ಪ್ರಾಧಾನ್ಯ ಹೆಚ್ಚು.

ಕೀಲುಗಂಟು ವೇಸುಕೊನಿ ಕೆರಲಿ ಪಿಡಿಕಿಲಿಂಚಿ
ಆಲಕಿಂಚೇವು ದಿಕ್ಕುಲ ಹನುಮಂತ 7–16

* * * *

ಪೆಟ್ಟಿನ ಜಂಗ ದಂಡಿ ಪಿಡಿಕಿಟ ಮೊಲಚೇಯಿ
ಅಟ್ಟೆ ಎಲಚೇಯೆತ್ತಿನ ಯಾಯಿತಮು 10–85

ಇನ್ನೊಂದು ಬಗೆಯೆಂದರೆ ಆಯಾ ಸ್ಥಳ ಪುರಾಣಗಳ ಸಂಘಟನೆಗಳನ್ನು ಕೀರ್ತಿಸುವುದು. ಉದಾಹರಣೆಗೆ ಕಿಷ್ಕಿಂಧೆಯಲ್ಲಿ ಹನುಮಂತ ವಿದ್ಯೆ ಕಲಿತನೆಂಬುದು. ಮತಂಗಾದ್ರಿ ವಿಜಯನಗರ ಹನುಮತ್ಸಂಕೀರ್ತನೆಗಳಲ್ಲಿ ಅನ್ನಮಯ್ಯ ಈ ವಿಶೇಷವನ್ನು ವಿವರಿಸಿದ್ದಾನೆ.

ಉದಯಾಸ್ತ ನಗಮುಲಕೊಕ
ಜಂಗ ಚಾಚಿನಾಡು
ಚದಿವೆ ರವಿತೊ ಸರ್ವಶಾಸ್ತ್ರಮುಲು
11–1–198

* * * *

ತುದ ಸೂರ್ಯಮಂಡಲಮು ತೋಡ
ಮೋಮು ತಿಪ್ಪುಕುಂಟೂ
ಪೆದವುಲೆತ್ತಿ ಚದಿವೆ ಪೆದ್ದ ಹನುಮಂತುಡು
11–1–175

ಸಪ್ತಗಿರಿಗಳಲ್ಲಿ ಅಂಜನಾದ್ರಿಯೊಂದು. ಇಲ್ಲಿಯೇ ಆಂಜನಾದೇವಿ ಹನುಮಂತನನ್ನು ಹೆತ್ತಳು ಎಂಬುದು ಐತಿಹ್ಯ. ಇದರಿಂದಾಗಿ ತಿರುಮಲೆ ತಿರುಪತಿಯ ಕೀರ್ತನೆಗಳಲ್ಲಿ ಹನುಮಂತನ ಬಾಲಲೀಲೆಗಳನ್ನು ವಿವರಿಸಿದ್ದಾನೆ ಅನ್ನಮಯ್ಯ.

ಪುಟ್ಟಿನ ನಾಡೆ ಭುವನಮುಲೆರಗಗ
ಪಟ್ಟೆತಿ ಸೂರ್ಯುನಿ ಪಂಡನುಚು 9–132

* * * *

ಅಂಜನೀದೇವಿ ಕುಮಾರ ಹನುಮಂತುಡ
ಕಂಜಾಪ್ತ ಫಲ ಹಸ್ತ ಘನ ಹನುಮಂತುಡ
9–233

ಅನ್ನಮಯ್ಯ ಹನುಮಂತನನ್ನು ಕುರಿತು ಚಿಂತಿಸಿದ ಭಾವಿಸಿದ ಪರಿಯೇ ಬೇರೆ. ಭಗವಂತನಿಗಿಂತ ಭಕ್ತ ಹೆಚ್ಚು ಎನ್ನುವುದು ಆತನ ನಿಶ್ಚಿತಾಭಿಪ್ರಾಯ. ಎಂತಲೇ ಮಂಗಾಂಬುಧಿ ಹನುಮಂತನ ಹಿರಿಮೆಯನ್ನು ಬೇರೇಜುಹಾಕಿ ಹೇಳುತ್ತಾನೆ.

ಇತಡೇ ಯತಡುಗಾ ಬೋಲೇಲಿಕ
ಬಂಟುನುನ್ನೈರಿ
ಮಿತಿಲೇನಿ ರಾಘವುಡು ಮೇಟಿ ಹನುಮಂತುಡು
11–1–48

ಈ ಪದ್ಯದಲ್ಲಿ ರಾಮಕಾರ್ಯಗಳೊಂದಿಗೆ ಹನುಮತ್ಕಾರ್ಯಗಳನ್ನು ಹೋಲಿಸುತ್ತಾ ಹೋಗುತ್ತಾನೆ. ಆತ ಜಲಧಿಗೆ ಸೇತುವೆ ಕಟ್ಟಿ ದಾಟಿದರೆ ಈತ ಹಾರಿಯೇ ದಾಟಿದ. ಆತ ರಾವಣನ ಅದಟನ್ನಡಗಿಸಿದರೆ ಈತ ಮೈರಾವಣನನ್ನು ದಂಡಿಸಿದ. ಬೆಟ್ಟವನ್ನೆತ್ತಿ ಹಿಡಿದವನಾತನಾದರೆ ಈತ ಬೆಟ್ಟದೊಡನೆ ಸಂಜೀವಿನಿಯನ್ನು ಎತ್ತಿ ತಂದವೊದಲಾಗಿ. ಹನುಮಂತನು ಅನ್ನಮಯ್ಯನಿಗೆ ಸರ್ವದೇವತಾ ಸ್ವರೂಪನಾಗಿ ಕಾಣುತ್ತಾನೆ. ಇಂದ್ರ, ಸೂರ್ಯ, ಗ್ರಹ ತಾರಕೆಗಳು ಶಕ್ತಿ ಗರುಡ, ವಾಯುದೇವ, ವರುಣ, ಬ್ರಹ್ಮದೇವ ಗಣವೆಲ್ಲ ಹನುಮಂತನಿಗೆ ರಕ್ಷೆಗಳೆಂದೂ ಅನ್ನಮಯ್ಯ ಒಂದೆಡೆ ಹೇಳುತ್ತಾನೆ. ಈ ಭೂಮಿಕೆಯಲ್ಲಿ ಹನುಮಂತನು ಭಾವೀಬ್ರಹ್ಮ ಎನ್ನುವುದನ್ನು ಆನೇಕ ಕೀರ್ತನೆಗಳಲ್ಲಿ ಸ್ಪಷ್ಟಗೊಳಿಸಿದ್ದಾನೆ.

ಅಲರ ನನ್ನಿಯು ಚೇಸಿ ಅಜುನಿ ಪಟ್ಟಾನಿಕಿ
ನಿಲುಚುನ್ನಾಡಿದಿಯೋ ನೀ ಬಂಟು 7–69

* * * *

ಮುಂದಟನೇಲೇ ಪಟ್ಟಮುನಕು
ಬ್ರಹ್ಮಯಿನಾಡು 11–1–167

* * * *

ಗಟ್ಟಿಗ ಬ್ರಹ್ಮ ಪಟ್ಟಾನಕು
ಕಾಚುಕೊನ್ನಾಡು 11–1–198

ಹನುಮಂತನ ಬ್ರಹ್ಮತ್ವಕ್ಕೆ ಬೆಲೆ ಕೊಟ್ಟು ಅನ್ನಮಯ್ಯ ಸಂತೃಪ್ತಿ ಪಡಲಿಲ್ಲ; ಬ್ರಹ್ಮತ್ವಕ್ಕೆ ಹೇತುವಾದ ಆತನ ಭಟತ್ವವನ್ನೂ ಅನ್ನಮಯ್ಯ ಕೊಂಡಾಡಿದ್ದಾನೆ.

ಆರಿಮುರಿ ಹನುಮಂತುಡಟ್ಟೆ ಬಂಟು
ವೆರವು ಲೇನಿ ರಘುವೀರುನಿಕಿ ಬಂಟು
10–278

ಭಟನಾದ ಹನುಮಂತನು ನಡೆಸಿದ ಲೋಕೋತ್ತರ ಕಾರ್ಯಗಳನ್ನು ವಿಸ್ತೃತಪಡಿಸಿ ರಾಮನನ್ನು ಹೊಗಳುವುದೂ ಒಂದು ರೀತಿ.

ಈತನಿದೆಂತ ಪ್ರತಾಪ ಮೀತನಿದೆಂತವುದಟು
ಈತಡು ರಾಮುನಿ ಬಂಟು ಯಿತನಿ
ಸೇವಿಂಪರೊ 11–1–198

ಭಾರತದ ಹನುಮದ್ವೃತ್ತಾಂತವೂ ಅನ್ನಮಯ್ಯನಲ್ಲಿ ಸಂಕೀರ್ತನೆಯಾಗಿದೆ.

ತೆರಮೀದ ನೀರೂಪು ದೆಚ್ಚಿಪೆಟ್ಟಿ ಯರ್ಜುನುಡು
ಕೌರವುಲ ಗೆಲಿಚೆ ಸಂಗರ ಭೂಮಿನಿ
ಸಾರೆಕು ಭೀಮುಡು ಪುರುಷಾಮೃಗಮು
ದೆಚ್ಚಿಚೋಟಿ
ನೀ ರೋಮಮುಲು ಗಾವಾ ನಿಖಿಲ
ಕಾರಣಮು 11–1–163

ಹೀಗೆಯೇ ರಾಮಾಯಣದಲ್ಲಿಲ್ಲದ ಪ್ರಸಿದ್ಧವಾದ ವಿಷಯಗಳನ್ನು ಕೀರ್ತಿಸಿದ್ದೂ ಉಂಟು.

ಪಾತಾಳಮು ಲೋಪಲಿ ಮೈರಾವಣು
ನಾತಲ ಜಂಪಿನ ಹನುಮಂತಾ 11–1–148

* * * *

ದಾರುಣವು ವಿನತಾ ತನಯಾದುಲ
ಗಾರವಿಂಪ ನಿಟು ಗಲಿಗಿತಿವಾ 11–1–31

ಅನುದಿನ ಪಾರಾಯಣಕ್ಕಾಗಿ ಸಂಸ್ಕೃತದಲ್ಲಿರುವಂತೆಯೇ ತೆಲುಗಿನಲ್ಲೂ ಸ್ತೋತ್ರ ಸಾಹಿತ್ಯವನ್ನುಂಟುಮಾಡಿದ್ದಾನೆ ಅನ್ನಮಯ್ಯ ಹನುಮಂತನ ಬಗ್ಗೆ. ಇನ್ನೊಂದು ಹನುಮಂತನನ್ನು ವರಪ್ರದಾತನೆಂಬಂತೆ ಚಿತ್ರಿಸಿರುವುದೂ, ಹನುಮತ್ಸಂಕೀರ್ತನೆಗಳಲ್ಲೇ ಅಲ್ಲದೆ, ರಾಮನಾಮ ಸಂಕೀರ್ತನೆಗಳಲ್ಲೂ ಹನುಮಂತನ ಪ್ರಸಕ್ತಿ ತಂದಿರುವುದೂ ಅನ್ನಮಯ್ಯನ ಕವಿತಾವಿಶೇಷವೆನ್ನಬೇಕು.

★

---

**ಸಪ್ತಗಿರಿಯ ಬಗ್ಗೆ**
**ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ**

---

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಪಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

ಶ್ರೀ ಜಂಡರಕಿ ರಾಘವೇಂದ್ರದಾಸರ ಜೀವನ ಚರಿತ್ರೆ.

ಲೇ: ಶ್ರೀನಿವಾಸಾಚಾರ್ಯ ಜಳಗೇರಿ

ಜಯಕೃಷ್ಣ ಪ್ರಕಾಶನ ಗುಲ್ಬರ್ಗ

ಬೆಲೆ: 3-00

ದಿವಂಗತ ಶ್ರೀ ಜಳಗೇರಿ ಶ್ರೀನಿವಾಸಾಚಾರ್ಯರು ಬರೆದಿರುವ ಶ್ರೀ ಜಂಡರಕಿ ರಾಘವೇಂದ್ರದಾಸರ ಜೀವನ ಚರಿತ್ರೆಯು ಈ ಶತಮಾನದಲ್ಲಿ ಮೊನ್ನೆಯವರೆಗೆ ಬಾಳಿದ (ಕ್ರಿ. ಶ. 1901-1982) ಹರಿದಾಸರೊಬ್ಬರ ಜೀವನ ಕಥೆ. ಶ್ರೀ ಜಂಡರಿಕಿದಾಸರ ಹುಟ್ಟು. ಬಾಲ್ಯ, ವಿದ್ಯಾಭ್ಯಾಸ, ಗೃಹಸ್ಥ ಜೀವನ, ಗುರೂಪದೇಶ ಪಡೆದ ಸನ್ನಿವೇಶ, ಹರಿಭಕ್ತಿಯನ್ನು ಬೆಳೆಸಿಕೊಂಡು, ಜ್ಞಾನ-ಭಕ್ತಿ - ವೈರಾಗ್ಯಗಳನ್ನೂ ಮೈಗೂಡಿಸಿಕೊಂಡು, ಅಪೇಕ್ಷಿತ ಶಿಷ್ಯರ ಲೌಕಿಕ ಆಸೆಗಳನ್ನು ತಪಶ್ಶಕ್ತಿಯಿಂದ ನೆರವೇರಿಸುತ್ತಾ, ಹರಿಭಕ್ತಿ ಬೆಳೆಸಿಕೊಳ್ಳುವಂತೆ, ಪೂಜೆ, ತಪಸ್ಸು, ಭಜನೆಗಳನ್ನೂ ನಡೆಸುತ್ತಾ ಪ್ರಭಾವಶಾಲಿ ವ್ಯಕ್ತಿಯಾಗಿ ಹೇಗೆ ಬದುಕಿದರೆಂಬ ಚರಿತ್ರೆಯನ್ನು ಲೇಖಕರು ಸರಳವಾಗಿ ಈ ಪುಸ್ತಕದಲ್ಲಿ ತಿಳಿಸಿರುವರು. ಈ ಜಂಡರಕಿ ದಾಸರು ಜೀವನದಲ್ಲಿ ಅನೇಕರ ಅನುಭವಕ್ಕೆ ತಂದು ಕೊಟ್ಟ ಪವಾಡಗಳನ್ನೂ ಇಲ್ಲಿ ಸಂಗ್ರಹಿಸಲಾಗಿದೆ. ಇವರ ಜೀವನ ಕ್ರಮ ಮತ್ತು ಉದ್ದೇಶಗಳನ್ನೂ ವಿವರಿಸುವ ಕೆಲವು ಪ್ರಸಂಗಗಳಲ್ಲಿ ಅಲ್ಲಲ್ಲಿ ಉದಹರಿಸಿರುವ ಶ್ರೀ ವಿಜಯ, ಶ್ರೀ ಪುರಂದರ ಹಾಗೂ ಶ್ರೀ ಜಗನ್ನಾಥದಾಸರ ರಚನೆಗಳ ಸಾಲುಗಳು ಭಗವದ್ಭಕ್ತರ ಹೃದಯವನ್ನು ಮೀಟುವಂತೆಯೂ, ಜಂಡರಕಿ ದಾಸರ ಬಗ್ಗೆ ಗೌರವ ಮೂಡುವಂತೆಯೂ ಇರುತ್ತವೆ.

ಜಂಡರಕಿ ದಾಸರ ಗುರುಗಳಾದ ಮಣೂರ ಹನುಮದ್ದಾಸರ ಜೀವನದ ಕೆಲವು ಮಹತ್ವದ ಸಂಗತಿಗಳನ್ನು ಪ್ರಾಸಂಗಿಕವಾಗಿ ಇಲ್ಲಿ ನಿರೂಪಿಸಿರುವುದು ಔಚಿತ್ಯಪೂರ್ಣವಾಗಿದೆ. ಇದರಿಂದ ಉತ್ತರ ಕರ್ನಾಟಕದ ಗುಲ್ಬರ್ಗಾ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶದಲ್ಲೂ, ಹೈದರಾಬಾದ್ ಕರ್ನಾಟಕ ಭಾಗಗಳಲ್ಲೂ ಈ ಗುರು-ಶಿಷ್ಯರ ಪ್ರಭಾವನೆಷ್ಟೆಂದು ತಿಳಿಯುತ್ತದೆ. ಆಧ್ಯಾತ್ಮಿಕ ದೃಷ್ಟಿ ಕ್ಷಚಿತ್ತಾಗುತ್ತಿರುವ ಈ ಕಾಲದಲ್ಲಿ ಕರ್ನಾಟಕದ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಹಲವರು ಹರಿದಾಸ ಪರಂಪರೆಯವರ ಪ್ರಭಾವದಿಂದ ಗುರೂಪದೇಶ ಪಡೆದು, ದ್ವೈತಸಿದ್ಧಾಂತವನ್ನರಿತು, ಸದಾಚಾರ ಸಂಪನ್ನರಾಗಿ. ಹರಿದಾಸರ ಕೀರ್ತನೆಗಳನ್ನು ಹಾಡಿ ಆನಂದ ಪರವಶರಾಗುವುದರೊಡನೆ ಇತರರಿಗೂ ಆನಂದವನ್ನುಂಟು ಮಾಡುತ್ತಾ, ಎಲೆಮರೆಯಲ್ಲಿದ್ದು ಪ್ರಸಿದ್ಧಿ ಪಡೆಯದೆ ಜೀವಿಸುತ್ತಿರುವರು. ಅಂತಹವರ ಜೀವನ ಚರಿತ್ರೆಯನ್ನು ಸಂಗ್ರಹಿಸಿ ವಿಸ್ತಾರವಾಗಿ ಬರೆದು ಪ್ರಕಟಿಸಿರುವುದು ಮೂಲಕ ಶಹಾಬಾದಿನ




'ಗುರುಬಾಂಧವರ' – ಆಸ್ತಿಕ ಜನರ ಮನಸ್ಸಿಗೆ ಆನಂದ ಉಂಟು ಮಾಡುವಂತಾಗಲಿ ಎಂದು ಹಾರೈಸುತ್ತೇನೆ. ಆಸ್ತಿಕ ಜನರು ಆದರಿಸುವ ಪುಸ್ತಕವಿದು ಎನ್ನಬಹುದು.

—ಕೆ. ಜಿ. ಎನ್.

---

ಶ್ರೀ ವೀರಬ್ರಹ್ಮಯ್ಯನವರ ಚರಿತ್ರೆ
(ಕಾಲಜ್ಞಾನ ಸಹಿತ)

ಸಂಗ್ರಾಹಕರು: ಶ್ರೀ ಅ. ಮ. ಸಿದ್ಧಲಿಂಗಯ್ಯ,

ಪ್ರಕಾಶಕರು: ಶ್ರೀ ಎಂ. ಪಿ. ಮಿನ್ನಾಜಪ್ಪ, ಆದೋನಿ. (ಅಂ. ಪ್ರ)

162 ಪುಟಗಳು, ಬೆಲೆ: ರೂ. 8-00.

ನಮ್ಮ ಭಾರತದೇಶದಲ್ಲಿ ಆಗಿಂದಾಗ್ಗೆ ವಿಭೂತಿ ಪುರುಷರು ಅವತರಿಸಿ ಜನತೆಯಲ್ಲಿ ಜಾಗೃತಿಯನ್ನುಂಟುಮಾಡಿ ಧರ್ಮವನ್ನು ಬೋಧಿಸಿ ಲೋಕ ಕಲ್ಯಾಣವನ್ನು ಸಾಧಿಸಿದ್ದಾರೆ. ವಿಜ್ಞಾನದ ಪ್ರಗತಿಯಿಂದ ಭೋಗಾಪೇಕ್ಷಿಯಾದ ಇಂದಿನ ಮಾನವನು ಆತ್ಮಶಕ್ತಿಯನ್ನು ಕಳೆದುಕೊಂಡು ಆಸುರೀಶಕ್ತಿಗೊಳಗಾಗಿ ಅಧೋಗತಿಗಿಳಿಯುತ್ತಿರುವುದನ್ನು ನೋಡುತ್ತಿದ್ದೇವೆ. ಅವನ ಉದ್ಧಾರಕ್ಕೆ ಮಹಾತ್ಮರ ಜೀವನ ಚರಿತ್ರೆಗಳು ದಾರಿದೀಪಗಳಾಗಿವೆ.

ಹದಿನೇಳನೇ ಶತಮಾನದಲ್ಲಿ ಜನಿಸಿದ ಮಹಿಮಾಪುರುಷ ಶ್ರೀ ವೀರಬ್ರಹ್ಮಯ್ಯನವರ ಜೀವನವನ್ನು ಚಿತ್ರಿಸುವುದೇ ಈ ಗ್ರಂಥ ರಚನೆಯ ಮೂಲೋದ್ದೇಶ.

ಮುಂದಾಗುವುದನ್ನು ಅರಿಯಲು ಮಾನವನು ಉತ್ಸುಕನಾಗಿರುವುದು ಸಹಜ. ಈ ತತ್ತ್ವವನ್ನು ಪ್ರಧಾನವಾಗಿಟ್ಟುಕೊಂಡು ಕಾಲಜ್ಞಾನದಿಂದ ಜನರಿಗೆ ಸುಖದ ಮಾರ್ಗವನ್ನು ಮಾಡಿಕೊಟ್ಟ ಮಹಾತ್ಮರು ಶ್ರೀ ಪೋತಲೂರಿ ವೀರಬ್ರಹ್ಮಯ್ಯನವರು.

ಪತಿತರನ್ನು ಉದ್ಧರಿಸಿ, ನಡೆದ ನೆಲವನ್ನು ನೋಡಿದ ಜೀವಿಗಳನ್ನು ಅನುಗ್ರಹಿಸಲು ಅವತರಿಸಿದ ಶಿವಾಂಶ ಸಂಭೂತರಾದ ರಾಜಯೋಗಿ ಶ್ರೀ ವೀರಬ್ರಹ್ಮಯ್ಯ.

ಪರಿಪೂರ್ಣಾಚಾರಿ ಪ್ರಕೃತಾಂಬೆ ದಂಪತಿಗಳ ವರಪುತ್ರರು ಅವರು. ಶೈಶವದಲ್ಲಿಯೇ ತಾಯಿ ತಂದೆಗಳು ಸ್ವರ್ಗಸ್ಥರಾಗಲು ಅತ್ರಿಮುನಿಗಳು ಆ ಶಿಶುವನ್ನು ವೀರಭೋಜಾಚಾರ್ಯ ವೀರ ಪಾಪಮಾಂಬ ದಂಪತಿಗಳಿಗೆ ಒಪ್ಪಿಸಿದರು. ಆ ಪುಣ್ಯ ದಂಪತಿಗಳು ಸಾಕಿ ಸಲುಹಿದ ಮಗುವೇ ವೀರಬ್ರಹ್ಮಯ್ಯ.

ಈ ಗ್ರಂಥದಲ್ಲಿ ವೀರ ಬ್ರಹ್ಮಯ್ಯ ನವರ ಜನನ, ಬನಗಾನಪಲ್ಲಿಯಲ್ಲಿ ಗರಿಮಿರೆಡ್ಡಿ ಅಚ್ಚಮ್ಮನವರ ಮನೆಯಲ್ಲಿ ಹಸುಗಳನ್ನು ಕಾಯುವುದು, ಆಗಲೇ ಕಾಲಜ್ಞಾನ ಬರೆದ ವಿಷಯ, ಹುಣಿಸೇಮರದ ಮಹಾತ್ಮೆ, ಮಾಂಸವನ್ನು ಹೂವಾಗಿಸುವುದು ನವಾಬರ ಕಣ್ತೆರೆಯಿಸಿದ ಸಂಘಟನೆ, ಬೆಂಕಿಯನ್ನು ಬರಿಸಿದುದು, ಸಿಹಿನೀರಿನಿಂದ ದೀಪ ಹತ್ತಿಸುವುದು, ಕುಷ್ಟವ್ಯಾಧಿ ನಿವಾರಣೆ-ಮುಂತಾದ ಪವಾಡಗಳ ವಿವರಣೆ, ಅವರು ಸಜೀವ ಸಮಾಧಿಯಾಗುವುದು ಮೊದಲಾಗಿ ಎಷ್ಟೋ ವಿಷಯಗಳು ಸ್ವಾರಸ್ಯವಾಗಿ ಚಿತ್ರಿಸಲಾಗಿದೆ.

ವೀರಬ್ರಹ್ಮಯ್ಯನವರ ಶಿಷ್ಯಸಂಕುಲದಲ್ಲಿ ಎಲ್ಲ ಕುಲದವರೂ ಇದ್ದಾರೆ.

'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂದು ಪುರಂದರದಾಸರು ಹಾಡಿದ್ದಾರೆ.

ವೀರಬ್ರಹ್ಮಯ್ಯನವರ ನೆಚ್ಚಿನ ಶಿಷ್ಯರಲ್ಲಿ ಪಿಂಜಾರ ಕುಲಸಂಜಾತನಾದ ಸಿದ್ದಯ್ಯ, ಮಾದಿಗ ಕಕ್ಕಯ್ಯ ಮುಖ್ಯರು.

(24ನೇ ಪುಟ ನೋಡಿ)

# ಮಿಂಚಿ ಬಂದ ಮಂದಹಾಸ

೧

ಸಾಕೇತ ಸಾಮ್ರಾಟನ ರಾಜೋದ್ಯಾನವೆಂದ ಮೇಲೆ ವೈಭವಕ್ಕೆ ಕೊರತೆ ಇಲ್ಲ. ಬಣ್ಣ ಬಣ್ಣದ ಕುಸುಮ ಪರಿಷತ್ತು ತನ್ನ ಸಂಪೂರ್ಣ ಕಾಂತಿಯಿಂದ ಜನರ ಕಣ್ಮನಗಳನ್ನು ಸೆಳೆಯುತ್ತಿದೆ. ಸೌರಭಭಾರದಿಂದ ಮೆಲ್ಲಗೆ ಸಂಚರಿಸುತ್ತಿರುವ ಗಂಧವಹ, ಮಧುಪ ಸಂಗೀತಕ್ಕೆ ಶ್ರುತಿ ಹಿಡಿದಂತೆ ಕಾಣುತ್ತಿದೆ. ಅರಮನೆಯ ಜನ ಓಡಾಡುವಾಗ, ಅವರ ಕೋಮಲ ಪಾದಗಳಿಗೆಂದು, ತಮಾಲವೃಕ್ಷಗಳು ಹೂವನ್ನು ಹಾಸಿವೆ. ಶುಕಪಿಕ ಕಲ ಕೂಜನದಿಂದ ವಾಯುಮಂಡಲವೆಲ್ಲ ಪುಲಕಿತವಾಗಿದೆ. ಅಲ್ಲೊಂದು ಕಾರಂಜಿ ತನ್ನ ಬೆಡಗು ಬೆಲ್ಲುತ್ತ ನರ್ತಿಸುತ್ತಿದೆ. ಅದರ ಪಕ್ಕದಲ್ಲೇ ಇದ್ದ ಮಲ್ಲಿಗೆ ಮಂಟಪದಲ್ಲಿ ಊರ್ಮಿಳಾದೇವಿ ಗಂಭೀರವಾಗಿ ಕುಳಿತಿದ್ದಾಳೆ. ದೂರದಿಂದ ಕಂಡವರು ಮಂಟಪದಲ್ಲೊಂದು ಮುದ್ದಾದ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ್ದಾರೆಂದೇ ಭಾವಿಸಬೇಕು—ಹಾಗಿದೆ ಆಕೆ ಕುಳಿತಿರುವ ಭಂಗಿ. ಅದು ಪ್ರತಿಮೆಯಲ್ಲ ಜೀವಂತ ಹೆಣ್ಣು—ಎನ್ನುವುದಕ್ಕೆ ಸಾಕ್ಷಿ ಎಂಬಂತೆ ಅಕ್ಷಿ ಪಟಲಗಳು ಆಗಾಗ ಚಲಿಸುತ್ತಿವೆ – ಕಣ್ಣರೆಪ್ಪೆಗಳ ಚಲನೆಯ ವಿನಃ ಇನ್ನಾವ ಚಲನೆಯೂ ಇಲ್ಲ. ಇದೇನು ಗಂಭೀರ ಮೌನವೆಂದು ಆಲೋಚಿಸುತ್ತಿದೆ—ಎದುರಿಗೆ ಮರದ ಮೇಲೆ ಕೂತಿರುವ ಗಿಣಿ. ಊರ್ಮಿಳೆಯ ಕಣ್ಣುಗಳಲ್ಲಿ ಯಾವುದೋ ಸಂಕಟ—ಯಾವುದೋ ವೇದನೆ—ಯಾವುದೋ ಉತ್ಸುಕತೆ—ಏನೋ ಕಾತರ ತುಂಬಿದೆ – ಇನ್ನೇನು ತುಳುಕೀತೇನೊ ಎಂಬಂತೆ.

ಅಷ್ಟರಲ್ಲಿ ದಾಸಿಯೊಬ್ಬಳು ಹೂವಿನ ಬುಟ್ಟಿ ಹಿಡಿದು ಮಲ್ಲಿಗೆ ಮಂಟಪಕ್ಕೆ ಬಂದಳು. ಅಲ್ಲಿದ್ದ ಮೌನ – ಗಾಂಭೀರ್ಯಗಳನ್ನು ಗಮನಿಸಿ, ಬುಟ್ಟಿಯನ್ನಲ್ಲಿಟ್ಟು ಸುಮ್ಮನೆ ಹೊರಟು ಹೋದಳು. ಊರ್ಮಿಳಾದೇವಿ ಕ್ಷಣಕಾಲ ಅದನ್ನೇ ದಿಟ್ಟಿಸಿ ನೋಡಿ – ಏನೊ ನೆನಪಾದಂತೆ ರಾತ್ರಿಯ ಪೂಜೆಗೆಂದು—ಹೂಗಳನ್ನು ಮಾಲೆ ಕಟ್ಟಲಾರಂಭಿಸಿದಳು. ಆಕೆ ಮಾಲೆ ಕಟ್ಟುವುದರಲ್ಲಿ ನಿಪುಣೆ, ಮಾಲೆ ಕಟ್ಟುವಾಗ ನೋಡಬೇಕು ಆ ಕೈಗಳ ಕಲಾತ್ಮಕಚಲನೆ.

ಊರ್ಮಿಳಾದೇವಿಯ ವೇಷ ಭೂಷಣಗಳನ್ನು ನೋಡಿ— ಈಕೆ ಘನ ಚಕ್ರೇಶ್ವರನೆಂದು ಹೆಸರಾಂತ ದಶರಥನ ಸೊಸೆಯೆಂದು—ಯಾರೂ ಹೇಳುವಂತಿಲ್ಲ. ಆಕೆ ಬಂಗಾರದ ಬಣ್ಣದ ವಲ್ಕಲ ವಸ್ತ್ರವನ್ನುಟ್ಟಿದ್ದಾಳೆ. ನೀಳವಾದ ಕೃಷ್ಣ ಕೇಶರಾಶಿಯಲ್ಲಿ ಆಕೆ ಕೇವಲ ಒಂದೇ ಒಂದು ಬಿಳಿಯಹೂ ಮುಡಿದಿದ್ದಾಳೆ. ಕುಂಕುಮಾಲಂಕೃತ ಅರುಣ ವಿಗ್ರಹದಂತಿರುವ ಊರ್ಮಿಳಾದೇವಿ— ಕಟ್ಟುತ್ತಿರುವ ಮಾಲೆ ಎಷ್ಟುದ್ದವಾಗಿದೆ – ಎಂದು ಆಗಾಗ ಪರೀಕ್ಷಿಸುತ್ತಿದ್ದಾಳೆ.

ಅಷ್ಟರಲ್ಲಿ ಮಾಂಡವಿ—ಶ್ರುತಕೀರ್ತಿ ಎಂಬ ಸೋದರಿಯರು ಮಲ್ಲಿಗೆ ಮಂಟಪಕ್ಕೆ ಬಂದರು.

“ಬನ್ನಿ – ಇಷ್ಟಹೊತ್ತು ನೀವಿಬ್ಬರೂ ಎಲ್ಲಿಗೆ ಹೋಗಿದ್ದಿರಿ” ? ಊರ್ಮಿಳೆ ಮೆಲುದನಿಯಲ್ಲಿ ಪ್ರಶ್ನಿಸಿದಳು.

“ಪಾದುಕಾಪೂಜೆಗಾಗಿ – ನಂದಿಗ್ರಾಮಕ್ಕೆ” ಸೋದರಿಯರ ಮಾತು ಕೇಳಿ, ಊರ್ಮಿಳೆ ಹೂವರಳಿದಂತೆ, ಮಂದಹಾಸ ಸೂಚಿಸಿದಳು ಆಕೆಯ ಮಾತೆಂದರೆ ಮಂದಹಾಸವೇ.

---

**ವಿದ್ವಾನ್ ಬ. ನ. ಗುಂಡೂರಾವ್**

---

“ಅಕ್ಕ – ನಾನೊಂದು ಮಾತು ಕೇಳಲೆ?” ಶ್ರುತಕೀರ್ತಿ ಮೆಲ್ಲಗೆ ಕೇಳಿದಳು.

“ಅಗತ್ಯವಾಗಿ ಕೇಳು—ಅದಕ್ಕೇಕಿಷ್ಟು ಸಂಕೋಚ”

“ಭಾವನವರು ಸ್ವಲ್ಪ ಕಠಿನ ಸ್ವಭಾವದವರೆಂದು ಕಾಣುತ್ತದೆ. ಅವರಿಗೆ ತಮ್ಮ ಅಣ್ಣನವರೇ ಸರ್ವಸ್ವವೂ ಆಗಿದ್ದಾರೆ. ಆ ಭುವನೈಕ ಪೂಜ್ಯರ ಬಗ್ಗೆ ಆ ಗೌರವ ಭಾವವಿರುವುದು ತಪ್ಪಲ್ಲ. ಹಾಗೆಂದು ನನ್ನ ಅಭಿಪ್ರಾಯವೂ ಅಲ್ಲ. ಆದರೆ............

“ಶ್ರುತಕೀರ್ತಿ— ಯಾರು ನನ್ನ ಆರಾಧ್ಯ ದೇವತೆಯಾಗಿದ್ದಾರೆ. ಅಂತಹ ನಿನ್ನ ಭಾವನವರ ಬಗ್ಗೆ ಹಾಗೆಲ್ಲ ಮಾತಾಡುವುದು ಸರಿಯಲ್ಲ – ತಂಗಿ. ಕರ್ತವ್ಯವು ಅವರ ದೃಷ್ಟಿಯಲ್ಲಿ ಪ್ರೇಮಕ್ಕಿಂತಲೂ ದೊಡ್ಡದಿರಬಹುದು” ಊರ್ಮಿಳೆ ಮಾಲೆ ಕಟ್ಟುತ್ತ ಹೇಳಿದಳು.

“ಇರಬಹುದು ಅಕ್ಕ. ಅದರೇನಂತೆ – ದೊಡ್ಡ ಭಾವನವರನ್ನು ಎಲ್ಲ ರೀತಿಯಲ್ಲೂ ಅನುಸರಿಸಿಕೊಂಡು ಹೋಗುವುದೇ ಅವರ ಜೀವನದ ವ್ರತವಾಗಿರುವಾಗ—ನಿನ್ನನ್ನೂ ಕಾಡಿಗೆ ಕರೆದು ಕೊಂಡು ಹೋಗಬಹುದಿತ್ತು ತಮ್ಮ ಜತೆಯಲ್ಲಿ”.

“ಅದುಸರಿ—ಸ್ವಲ್ಪಯೋಚನೆ ಮಾಡು ಶ್ರುತಕೀರ್ತಿ; ಹಾಗೊಂದುವೇಳೆ ಅವರು ನನ್ನನ್ನು ಕರೆದುಕೊಂಡು ಹೋಗಿದ್ದಿದ್ದರೆ, ಇಲ್ಲಿ ಅತ್ತೆಯವರಿಗೆಷ್ಟು ಕಷ್ಟ – ಎಷ್ಟು, ಯೋಚನೆಯಾಗುತ್ತಿತ್ತು. ವನವಾಸದಲ್ಲಿ ಒಬ್ಬ ಹೆಂಗಸಿದ್ದರೇನೇ ತುಂಬ ಕಷ್ಟವಾಗುತ್ತದೆ. ಅದರಲ್ಲಿ ಇಬ್ಬರಿದ್ದರಂತೂ ಇನ್ನೂ ಹಿಂಸೆಯಲ್ಲವೇ ? ಅದೂ ಅಲ್ಲದೆ ಇಬ್ಬರು ಹೆಂಗಸರು ಒಂದು ಕಡೆ ಇರಲೂಬಾರದು. ಅತ್ತೆಯವರಾದ ಸುಮಿತ್ರಾದೇವಿ ನಿಮ್ಮ ಭಾವನವರಿಗೇನು ಹೇಳಿದ್ದಾರೆ - ಗೊತ್ತೇನು ? ಅಗ್ರಜರನ್ನು ಅಣ್ಣನೆಂಬ ಸಲಿಗೆಯಿಂದ ಕಾಣಬಾರದವರ ಅತ್ಯಂತ ಶ್ರದ್ಧಾ ಭಕ್ತಿಗಳಿಂದ ಅವರ ಸೇವೆಮಾಡಬೇಕು – ಎಂದಿದ್ದಾರೆ. ನಾನು ವನವಾಸಕ್ಕೆಂದು ಹೊರಟಿದ್ದಿದ್ದರೆ ನಿಮ್ಮ ಭಾವನವರು ಬಹುಶಃ ತಮ್ಮ ತಾಯಿಯವರ ಮಾತಿನಂತೆ ನಡೆದು ಕೊಳ್ಳಲು ಕಷ್ಟವಾಗುತ್ತಿರಲಿಲ್ಲವೇ? ನಾನು ಅವರ ಜೊತೆಯಲ್ಲಿ ಹೋಗದೆ ಇದ್ದುದಕ್ಕೆ ಇವೆಲ್ಲ ಕಾರಣಗಳುಂಟು – ತಂಗಿ’’.

ಊರ್ಮಿಳೆಯ ವಾದ ಸರಣಿಯ ಹಿಂದೆ ಅಡಗಿದ್ದ ಶಾಂತಿಗುಣ, ಸಹನ ಶೀಲತೆ ಹಾಗೂ ಸೌಜನ್ಯವನ್ನು ಕಂಡು ಶ್ರುತಕೀರ್ತಿ ಮತ್ತು ಮಾಂಡವಿ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಸಂಜೆಯ ಪೂಜೆಗೆ ಅಣಿಮಾಡಬೇಕಾಗಿದ್ದುದರಿಂದ ಎಲ್ಲರೂ ಅರಮನೆಗೆ ಹೊರಟರು.

೨

ಕೌಸಲ್ಯೆ – ಸುಮಿತ್ರೆಯರಿಗೆ ಬೇಕಾದ ಪೂಜಾ ಪರಿಕರಗಳನ್ನು ಸಿದ್ಧಪಡಿಸಿದ ನಂತರ ಊರ್ಮಿಳೆ ಕೈಕೆಯ ಭವನಕ್ಕೆ ಬಂದಳು. ತಾನು ಬಂದದ್ದು ಸ್ವಲ್ಪ ತಡವಾಯ್ತೇನೋ—ಎಂಬ ಭಾವನೆ ಆಕೆಯ ಮುಖದಲ್ಲಿತ್ತು. ಕೈಕೆ ಮರುಮಾತಾಡಲಿಲ್ಲ. ಬಹುಶಃ ಆಕೆಯ ಮನಸ್ಸಿನ ಆಂದೋಳನವೇ ಬೇರೆ ರೂಪದ್ದು. ಊರ್ಮಿಳೆಯಲ್ಲಿರುವಷ್ಟು ಶಾಂತಿ ಸೌಜನ್ಯಾದಿಗಳಲ್ಲಿ ಹತ್ತರಲ್ಲೊಂದು ಭಾಗವಿದ್ದಿದ್ದರೂ ಕೈಕೆ ಅಯೋಧ್ಯೆಯರಮನೆಯ ಅಶಾಂತಿಗೆ ಗಡಿಬಿಡಿಗೆ ಕಾರಣಳಾಗುತ್ತಿರಲಿಲ್ಲ. ಲೋಕದ ಆಕ್ಷೇಪಣೆಗೆ ಸಿಕ್ಕುವ ಅಗತ್ಯವಿರುತ್ತಿರಲಿಲ್ಲ. ಈ ಚಿಕ್ಕವಯಸ್ಸಿನ ಹುಡುಗಿಯು ಮೂಕವೇದನೆಗೆ ನಾನು ಕಾರಣವಾದರೂ ಸಹ – ಈಕೆ ಅದೆಷ್ಟು ಗೌರವದಿಂದ— ಭಕ್ತಿಯಿಂದ ನನ್ನ ಸೇವೆ ಮಾಡುತ್ತಿದ್ದಾಳೆ – ಎಂಬ ವಿಚಾರ ಕೈಕೆಯ ಮನಸ್ಸಿನಲ್ಲಿ ಕೊರೆಯುತ್ತಲೇ ಇದ್ದಿತು. ತ್ಯಾಗಮೂರ್ತಿಯಾದ ಸೊಸೆ— ಸ್ವಾರ್ಥ ಹಾಗೂ ಅಸೂಯೆಗಳ ಪ್ರತಿಮೆಯಂತಿರುವ ಅತ್ತೆ !! ಇವರಿಬ್ಬರಲ್ಲಿ ವಯಸ್ಸಿನ ಅಂತರಕ್ಕಿಂತ ಸಾವಿರಪಾಲು ಅಂತರವಿದೆ ಸ್ವಭಾ

ವಗಳಲ್ಲಿ!! ಇದು ಆಕೆಯ ದೀರ್ಘಚಿಂತನೆಯ ನಂತರದ ಮೌಲ್ಯ ಮಾಪನವಾಗಿತ್ತು.

ಊರ್ಮಿಳೆಯನ್ನು– ದೇವರ ಮಂಟಪದ ಮುಂದೆ ತದೇಕ ಚಿತ್ತದಿಂದ ರಂಗವಲ್ಲಿ ಹಾಕುತ್ತಿದ್ದ–ಊರ್ಮಿಳೆಯನ್ನು ಕೈಕೆ ಸುಮ್ಮನೆ ನೋಡುತ್ತಿದ್ದಳು. ಆಕೆಯ ಕಣ್ಣಂಚಿನಲ್ಲಿ ನಾಲ್ಕುಹನಿ ಕಂಬನಿ ತುಂಬಿತ್ತು. ಅತ್ತೆಯವರು ತಾನು ಮಾಡುತ್ತಿರುವ ಕೆಲಸವನ್ನು ಗಮನಿಸುತ್ತಿದ್ದಾರೆಂದು ಸೂಕ್ಷ್ಮವಾಗಿ ಅರಿತು ಕೊಂಡ ಊರ್ಮಿಳೆ–ಅದೇಕೆ ಹಾಗೆ ನೋಡುತ್ತಿದ್ದೀರಿ – ರಂಗೋಲಿ ಚೆನ್ನಾಗಿಲ್ಲವೇ?- ಎಂದಳು. ಬಹುಶಃ ಕೈಕೆ ಈ ಮಾತಿಗಾಗಿ ಕಾದಿದ್ದಳೆಂದು ಕಾಣುತ್ತದೆ; ಊರ್ಮಿಳೆಯನ್ನು ಬಾಚಿ ತಬ್ಬಿಕೊಂಡಳು. ಯಾರೊಬ್ಬರೂ ಮಾತಾಡಲಿಲ್ಲ. ಇಬ್ಬರ ಕಣ್ಣಲ್ಲೂ ಕಂಬನಿ ಧಾರೆ ಧಾರೆಯಾಗುರುಳಿ ಬರುತ್ತಿತ್ತು. ಇಂತಹ ಸಂದರ್ಭದಲ್ಲಿ ಮಾತಿಗಿಂತ ಮೌನ ಮೇಲು – ಅವರವರ ಮನಸ್ಸಿನಲ್ಲಡಗಿದ್ದ ಭಾವನೆ, ವೇದನೆ–ಸಂಕಟ – ಎಲ್ಲವನ್ನೂ ಕಣ್ಣೀರ ಧಾರೆಯೇ ಸಾರಿ ಹೇಳುತ್ತಿತ್ತು. ದೇವಮಂಟಪದ ನಂದಾದೀಪ ಎಲ್ಲವನ್ನೂ ನೋಡುತ್ತ ಮೂಕ ಸಾಕ್ಷಿಯಂತೆ ಉರಿಯುತ್ತಿತ್ತು. ನಿಧಾನವಾಗಿ ಕೈಕೆಯ ಕಂಬನಿಗೆ ನಾಲಗೆ ಬಂದಿತು. ಆಕೆ ಹೇಳಿದಳು.

"ಮಗು–ನಿನ್ನೆಲ್ಲಸಕಂಟಕ್ಕೆ ಮೂಲಕಾರಣಳಾದವಳು ನಾನು. ನನ್ನ ಅಪರಾಧಕ್ಕೆ ಕ್ಷಮಾಪಣೆಯೇ ಇಲ್ಲ ಊರ್ಮಿಳ. ನೀನಾದರೂ ನನ್ನನ್ನು ಕ್ಷಮಿಸುವೆಯಾ ಮಗಳೆ. ವಯಸ್ಸಿನಲ್ಲಿ ನೀನು ಚಿಕ್ಕವಳಾದ್ದರಿಂದ ನಾನು ನಿನಗೆ ನಮಸ್ಕಾರ ಮಾಡಬಾರದು. ಹಾಗೆ ಮಾಡಿದರೆ ಅದು ನಿನಗೆ ಶ್ರೇಯಸ್ಸಲ್ಲ ಈಗಾಗಲೇ ನಾನು ನಿನ್ನ ಜೀವನಕ್ಕೆ ಸಾಕಷ್ಟು ಅಶಾಂತಿ ತಂದೊಡ್ಡಿದ್ದೇನೆ. ನನ್ನನ್ನು ಕ್ಷಮಿಸು ಊರ್ಮಿಳಾ".

ಕೈಕೆಯ ಪಶ್ಚಾತ್ತಾಪ ಕಟ್ಟೆಯೊಡೆದು ಹರಿಯಿತು. ಊರ್ಮಿಳೆ ಏನೂ ಮಾತಾಡಲಿಲ್ಲ. ಹಿರಿಯರ ಮುಂದೆ ಮಾತಾಡುವುದು ಸೂಕ್ತವಲ್ಲವೆಂದು ಆಕೆಯ ಭಾವನೆ ಇರಬಹುದು. ತಲೆ ತಗ್ಗಿಸಿದ್ದಳು. ಹೊರಗೆ ಆದ ಶಬ್ದದ ಮೂಲವನ್ನರಿಯುವ ನೆಪ ಮಾಡಿ ಹೊರಬಂದಳು.

"ಊರ್ಮಿಳೆ ಈ ಮನೆಗೆ ಸೊಸೆಯಲ್ಲ – ಈ ಮನೆಯ ದೇವತೆ" ಹೊರ ಹೊರಟ ಮೌನದ ಮೂರ್ತಿಯನ್ನು ನೋಡುತ್ತ ಒಳಬಂದ ಕೌಸಲ್ಯೆ ಹೇಳಿದಳು.

"ಕೇವಲ ದೇವತೆಯಲ್ಲ – ಆದರ್ಶದೇವತೆ" ಎಂದಳು ಆಕೆಯೊಡನೆಯೇ ಬಂದ ಸುಮಿತ್ರೆ. ತುಸು ಹೆಮ್ಮೆಯ ಭಾವವೂ ಇರದಿರಲಿಲ್ಲ ಆ ಮಾತಿನಲ್ಲಿ.

ಹಿರಿಯರಾಣಿಯರ ಧ್ವನಿ ಕೇಳಿ ಕೈಕೆ ತಲೆತಗ್ಗಿಸಿಕೊಂಡಳು. ಕ್ಷಣಕಾಲ ಚೇತರಿಸಿಕೊಂಡು ಗಂಭೀರವಾಗಿ ಹೇಳಿದಳು - ಊರ್ಮಿಳೆ ಸಹನಾಮೂರ್ತಿ ಕ್ಷಮಾಮೂರ್ತಿ. ಆಕೆಯ ಸದ್ಗುಣದ ದಶಮಾಂಶವಾದರೂ ನನ್ನಲ್ಲಿದ್ದಿದ್ದರೆ ಸಾಕೇತ ಸಾಮ್ರಾಜ್ಯದ ಇತಿಹಾಸವೇ ಬೇರೆಯಾಗಬಹುದಿತ್ತು. ಸೌಮಿತ್ರಿ ಮುನಿವೇಷಧಾರಿಯಾಗಿ, ವನವಾಸದಲ್ಲಿ ಅಗ್ರಜನ ಹಾಗೂ ಅತ್ತಿಗೆಯ ಸೇವೆಮಾಡಿ ದೊಡ್ಡ ಹೆಸರು ಪಡೆದಿರಬಹುದು. ಆದರೆ ತನ್ನ ತಪೋಮಯವಾದ ಜೀವನದಿಂದ ಊರ್ಮಿಳಾದೇವಿ ಆತನಿಗಿಂತಲೂ ದೊಡ್ಡ ಕೀರ್ತಿಗೆ ಭಾಜನಳು. ವನವಾಸದವಧಿಯ ನಂತರ ಅಯೋಧ್ಯೆಗೆ ಬಂದಾಗ ಸೌಮಿತ್ರಿ, ಈ ಸಾಧ್ವಿಯ ಮೌನ ತಪಸ್ಸನ್ನು–ಸುದೀರ್ಘ ನಿರೀಕ್ಷಣೆಯನ್ನದೆಷ್ಟು ರೀತಿಯಲ್ಲಿ ಪ್ರಶಂಸೆ ಮಾಡುತ್ತಾನೋ!!

"ನಾನೂ ಹಾಗೇ ಯೋಚಿಸುತ್ತಿದ್ದೇನೆ ಕೈಕೆ. ಊರ್ಮಿಳೆ ಈ ಮರ್ತ್ಯಲೋಕದವಳಲ್ಲ. ಆಕೆಯ ರೀತಿ ನೀತಿ ಜೀವನಕ್ರಮವೇ ಬೇರೆ, ಸೌಮಿತ್ರಿ ಸ್ವಲ್ಪ ಮುಂಗೋಪಿ – ಹಟವಾದಿ. ಅವನು ತಲೆ ತಗ್ಗಿಸುವುದು ರಾಮನ ಮುಂದೆ ಮಾತ್ರ. ಆದರೆ ಬಹುಶಃ ಈ ಸಾಧ್ವೀ ಶಿರೋಮಣಿಯ ಮುಂದೆ ಅವನು ಖಂಡಿತ ಪ್ರಶಂಸೆಯ ಮಾತು ಆಡಿ ತೀರುತಾನೆ. ಆದರೆ ಈ ಸುಕೋಮಲ ಪುಷ್ಪ ಅವನು ಬರುವುದರೊಳಗಾಗಿ ಬಾಡಿ–ಬಸವಳಿದು–ಉದುರಿ ಹೋಗಬಾರದು – ಮುದುಡಿ ಹೋಗಬಾರದು – ಅಷ್ಟೆ"

ಸುಮಿತ್ರೆ ಹೇಳಿದಳು.

"ನಿಜ ಹಾಗಾಗಬಾರದು. ಹಾಗಾಗಲಾರದೆಂದೇ ನನ್ನ ಭಾವನೆ. ಏಕೆ ಗೊತ್ತೆ ತಂಗಿ – ಊರ್ಮಿಳೆ – ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ–ಎಂಬ ಸ್ವಭಾವದವಳು. ಜಗತ್ತಿನ ಸ್ತ್ರೀಯರೆಲ್ಲ ಊರ್ಮಿಳೆಯಂತೆ ಸ್ವಭಾವ ಹೊಂದಿರುವುದಾದರೆ ಮನೆ ಮನೆಯೂ ನಂದನವನವಾದಿತು."

— ಕೌಸಲ್ಯೆ ಹೇಳಿದಳು.

ಶ್ರೀ

ಅಯೋಧ್ಯೆಯಲ್ಲಿ – ಹೊದ ಜೀವ ಮರಳಿ ಬಂದಂತೆ ಅದೇನೋ ಸಂಭ್ರಮ ಸಡಗರ ಕಾಣುತ್ತಿದೆ. ವನವಾಸದವಧಿ ಮುಗಿದು ಸೀತಾರಾಮ ಲಕ್ಷ್ಮಣರು ಹಿಂದಿರುಗಿ ಬರುತ್ತಿದ್ದಾರೆಂಬ ವಾರ್ತೆ ಬಂದಿದೆ. ನಗರವಾಸಿಗಳ ಆನಂದಕ್ಕೆ ಪಾರವಿಲ್ಲ–ಊರೆಲ್ಲ ಸಿಂಗಾರಗೊಂಡು, ಲೋಕಾಭಿರಾಮನ ಸ್ವಾಗತಕ್ಕೆ ಸಕಲ ಏರ್ಪಾಟನ್ನೂ ಮಾಡುತ್ತಿದೆ. ಹದಿನಾರು ವರ್ಷಗಳ ಕತ್ತಲೆಯ ತೆರೆ ಸರಿದಿದೆ. ಮಂಗಳದ ಭಾಗ್ಯೋದಯವಾಗಲಿದೆ. ಈ ಶುಭ ವಾರ್ತೆ ತಂದ ಆಂಜನೇಯ ಅಯೋಧ್ಯೆಯ ಮಹಾಜನಗಳ ಸಂತೋಷ ಸಂಭ್ರಮ ನೋಡಿ ಹಿಗ್ಗುತ್ತಿದ್ದಾನೆ. ರಾಜಸೌಧದ ಅಲಂಕಾರದಲ್ಲಿ ಹನುಮಂತನೂ ಪಾಲ್ಗೊಂಡಿದ್ದಾನೆ. ಅಯೋಧ್ಯೆಯ ಅರಮನೆಯ ಅಂದಚಂದ ಕಂಡು ಆಂಜನೇಯ ಪರಮಾನಂದ ಭರಿತನಾಗಿದ್ದಾನೆ, ಅದೇನು ವಾಸ್ತು ಶಿಲ್ಪ ವಿನ್ಯಾಸ!! ಅದೇನು ವೈಭವ!! ಅದೇನು ಶೃಂಗಾರ!!

ದಾಶರಥಿಯ ಪದಪದ್ಮಾರಾಧಕನಾದ ಪವಮಾನಸುತ – ದೂರದಲ್ಲಿ ಉಪ್ಪರಿಗೆಯಿಂದ ಯಾರೋ ಇಳಿದು ಬರುತ್ತಿರುವುದನ್ನು ಗಮನಿಸಿದ – ಯಾರದು ಧವಳಾಂಬರ ಧಾರಣೆಯಾದ ತಟಲ್ಲತೆಯಂತೆ–ಮೂರ್ತಿವೆತ್ತ ತಪಸ್ಸಿನಂತೆ–ನಡೆದು ಬರುವ ಗಾಂಭೀರ್ಯದಂತೆ – ಚಲಿಸುವ ಸೌಜನ್ಯದಂತೆ – ಬರುತ್ತಿರುವುದು ಯಾರು? ಆಕೆ ನೇರವಾಗಿ ಆಂಜನೇಯನ ಬಳಿಗೆ ಬಂದಳು. ಬಹು ಸಂಕೋಚದಿಂದ ಅತ್ತಿತ ನೋಡುತ್ತ ಮೆಲ್ಲಗೆ ಕೇಳಿದಳು – ವನವಾಸಕ್ಕೆಂದು ಹೊರಟಿದ್ದ ರಘುವಂಶಮಣಿ ಚೆನ್ನಾಗಿದ್ದಾರೆಯೆ? ಭಾಗ್ಯಶಾಲಿನಿಯಾದ ನನ್ನ ಅಕ್ಕ – ಸೀತಾದೇವಿ–ಕ್ಷೇಮವೇ? ಅವರಿಬ್ಬರನ್ನೂ ಎಡೆ ಬಿಡದೆ ಹಿಂಬಾಲಿಸಿದ ಆವರಿಬ್ಬರಿಗೆ ನಿರಂತರ ಸೇವೆಸಲ್ಲಿಸಿದ ಆ ಇನ್ನೊಬ್ಬರು ಕುಶಲವಷ್ಟೆ?

ಬುದ್ಧಿವಂತರಲ್ಲಗ್ರಮಾನ್ಯನಾದ, ಜ್ಞಾನಿಗಳಲ್ಲಗ್ರಗಣ್ಯನಾದ ಮಾರುತಿಗೆ ಆಕೆ ಯಾರೆಂದು ಅರ್ಥವಾಯ್ತು. ಆಕೆಗೆ ಸಾಷ್ಟಾಂಗ ನಮಸ್ಕಾರ ಮಾಡಿದ. ತಪಸ್ವಿನಿಯಾದ ಊರ್ಮಿಳಾದೇವಿಯ ದರ್ಶನದಿಂದ ಧನ್ಯನಾದನೆಂದೇ ಭಾವಿಸಿದ.

"ತಾಯಿ, ನಿಮ್ಮ ತಪಶ್ಶಕ್ತಿಯ ಪ್ರಭಾವದಿಂದ ಲಕ್ಷ್ಮಣಸ್ವಾಮಿ ಕ್ಷೇಮವಾಗಿದ್ದಾರೆ. ಪಾತಿವ್ರತ್ಯದ ತಪಸ್ಸಿನ – ಗಾಂಭೀರ್ಯ ಸೌಜನ್ಯದ ಎರಡು ದೇವತಾವಿಗ್ರಹಗಳನ್ನು ಕಂಡು ಪುನೀತನಾಗುವ ಸೌಭಾಗ್ಯ ಪಡೆದ ನನ್ನ– ಪೂರ್ವಪುಣ್ಯಕ್ಕೆಣೆ ಉಂಟೆ?"

ಮಾರುತಿ ಗಂಭೀರವಾಗಿ ನುಡಿದ.

"ಹಾಗೆಂದರೇನೆಂದು ಕೇಳಬಹುದೇ?"

"ಲಂಕೆಗೆ ಹೊದಾಗ ಅಶೋಕವನದಲ್ಲಿ ಸೀತಾದೇವಿಯ ದರ್ಶನವಾಯ್ತು. ಅಯೋಧ್ಯೆಗೆ ಬಂದಾಗ ಅರಮನೆಯಲ್ಲಿ ತಮ್ಮ ದರ್ಶನವಾಯ್ತು. ಪರಮಪೂಜ್ಯರೂ – ಮಹಿಮಾಸಂಪನ್ನರೂ ಆದ ನಿಮ್ಮಿಬ್ಬರ ದರ್ಶನ ಭಾಗ್ಯ ಪೂರ್ವಪುಣ್ಯವಲ್ಲದೆ ಮತ್ತೇನು?

"ಅಕ್ಕನವರೆಲ್ಲಿ – ನಾನೆಲ್ಲಿ? ಈ ಅಲ್ಪಳನ್ನು ಆ ಭೂಜಾತೆಯೊಡನೆ ಹೋಲಿಕೆ ಹಾಕುವುದೇ? ಇದು ನಿಮ್ಮ ಸೌಜನ್ಯವೇ ಹೊರತು ನನ್ನ ಯೋಗ್ಯತೆಯಲ್ಲ"–ಎನ್ನುತ್ತ ಊರ್ಮಿಳಾದೇವಿ ಮರು ಮಾತಿಗೆ ಅವಕಾಶ ನೀಡದೆ ನಮಸ್ಕರಿಸಿ ಹೊರಟಳು.

ಬೆಳಗಾದ ಕೂಡಲೆ ರಾಮದರ್ಶನಾಕಾಂಕ್ಷಿಗಳಾದ ಜನ ಲಕ್ಷಲಕ್ಷ ಸಂಖ್ಯೆಯಲ್ಲಿ ಬರತೊಡಗಿದರು. ಮಂಗಳವಾದ್ಯಗಳು ಸುಮಂಗಲಿಯರ ಸಡಗರದ ನಡುವೆ ರಾಜಮರ್ಯಾದೆಗಳೊಂದಿಗೆ ಕನಕರಥಾರೂಢನಾಗಿ ದಾಶರಥಿ ಸೀತಾದ್ವಿತೀಯನಾಗಿ ನಂದಿಗ್ರಾಮದಿಂದ ಅಯೋಧ್ಯೆಗೆ ಬಿಜಯ ಮಾಡುತ್ತಿರುವುದನ್ನು ಊರ್ಮಿಳೆ ಉಪ್ಪರಿಗೆಯಿಂದಲೇ ಕಂಡಳು. ರಾಮನ ಬಳಿ ಕರ್ಮಯೋಗಿಯಂತೆ ನಿಂತಿದ್ದ ಸೌಮಿತ್ರಿಯನ್ನು ನೋಡಿದಳು. ಅದೇ ಗಾಂಭೀರ್ಯ, ಅದೇ ಸೌಂದರ್ಯ – ಅದೇ ಶಾಂತ ಮುಖಮುದ್ರೆ!! ಅರಮನೆಗೆ ಬಂದಮೇಲೆ ಕೌಸಲ್ಯಾದೇವಿ ರಾಮಚಂದ್ರನನ್ನು ಏಕಾಂತವಾಗಿ ಕರೆದು ಅದೇನೊ ಮಾತಾಡಿದಳು. ಆತ ನಸುನಗುತ್ತ ಲಕ್ಷ್ಮಣನನ್ನ ಕರೆದು ಅದೇನೊ ಹೇಳಿದ. ಸಂಕೋಚದಿಂದ ಸೌಮಿತ್ರಿಯ ಮುಖ ಸ್ವಲ್ಪ ಕೆಂಪಾಯ್ತು – ಆಗಲಿ ಅಣ್ಣ – ನಿನ್ನ ಆಜ್ಞೆಯಂತೆ ರಾಜ್ಯಯೋಗ್ಯವಾದ ಉಡುಪು ಧರಿಸಿ ನಾನೀಗಲೇ ಆಕೆಯನ್ನು ಕಾಣಲು ಹೊಗುತ್ತೇನೆ– ಎಂದು ಬಿನ್ನವಿಸಿದ.

ಊರ್ಮಿಳಾದೇವಿ ಈ ಪುಣ್ಯಮುಹೂರ್ತಕ್ಕೆಂದು ಹದಿನಾಲ್ಕುವರ್ಷ ಕಾದಿದ್ದಾಳೆ. ಎದುರಿಗೆ ನಿಂತ ಸೌಮಿತ್ರಿಯ ಭದ್ರಾಕೃತಿಯನ್ನು ಕಂಡು ಪುಲಕಿತಳಾದ ಊರ್ಮಿಳೆ ಆತನ ಪದಗಳಿಗೆರಗಿದ್ದೇ ಅಲ್ಲದೆ ; ತನ್ನ ಕಣ್ಣೀರಧಾರೆಯಿಂದ ಆತನ ಪಾದತೊಳೆದಿದ್ದಾಳೆ. ಲಕ್ಷ್ಮಣ ಆಕೆಯನ್ನು ಹಿಡಿದೆತ್ತಿದ್ದಾನೆ. ಕ್ಷಣಕಾಲ ಯಾರೂ ಮಾತಾಡುತ್ತಿಲ್ಲ. ಆದರೆ ಹೃದಯಗಳು ಮಾತ್ರ ತಮ್ಮದೇ ಆದ ಮೌನ ಭಾಷೆಯಲ್ಲಿ ಮಾತಾಡುತ್ತಿದ್ದವು.

" ನಿನ್ನ ತಪಸ್ಸು – ನಿನ್ನ ಸಂಯಮ ಅಲ್ಲಿ ನನಗೊಂದು ರಕ್ಷಾಕವಚವಾಗಿ ಕಾಪಾಡಿತು ಊರ್ಮಿಳ ನೀನು ಅಕ್ಷರಶಃ ಸಹಧರ್ಮಿಣಿ "

ಸೌಮಿತ್ರಿ ಗದ್ಗದ ಕಂಠದಿಂದ ಹೇಳಿದ.

" ಅಷ್ಟುದೊಡ್ಡ ಮಾತೇಕೆ – ಇಲ್ಲಿ ನನ್ನನ್ನೂ – ಅಲ್ಲಿ ನಿಮ್ಮನ್ನೂ ಕಾಪಾಡಿದ್ದು ಪ್ರಭು ರಾಮಚಂದ್ರನ ಅವ್ಯಾಜಕರುಣೆ– ಅಪರಿಮಿತ ವಾತ್ಸಲ್ಯ. ವನವಾಸದ ವಧಿಯಲ್ಲೂ ನೀವು ಆಗಾಗ ನನ್ನನ್ನು ಸ್ಮರಿಸಿಕೊಳ್ಳುತ್ತಿದ್ದಿರಲ್ಲವೆ ? ಅದೇ ನನ್ನ ಭಾಗ್ಯ– ಅದೇ ನನ್ನ ಅದೃಷ್ಟ."

ಊರ್ಮಿಳೆ ನಸುನಗುತ್ತ ತುಂಬುನಯನದಿಂದ ನುಡಿದಳು. ಆಕೆಯ ಮುಖದಲ್ಲಿ ಹದಿನಾಲ್ಕುವರ್ಷಗಳ ನಂತರ ಅರಳಿದ ಮಂದಹಾಸಕ್ಕೆ ಅದೆಷ್ಟು ಬೆಲೆ!! ಅದೆಷ್ಟು ಮಹತ್ವ!! ಅದೆಷ್ಟು ಅರ್ಥ!!

★



(22ನೇ ಪುಟದಿಂದ)

ವೀರಬ್ರಹ್ಮಯ್ಯ ಅನುಭಾವಿ, ಸಮಾಜ ವಿಮರ್ಶಕ ಹಾಗೂ ಕ್ರಾಂತಿಕಾರ ಕವಿ. ಸಾಮಾನ್ಯರಲ್ಲಿದ್ದ ಅಜ್ಞಾನ ಅನಾಚಾರಗಳನ್ನು ಅಳಿಸಿಹಾಕಲು ಅವರು ಸುಬೋಧಕವಾದ ಸರಳ ರೀತಿಯಲ್ಲಿ, ಸಾಮಾನ್ಯರಿಗೆ ತಿಳಿದ ಉಪಮೆಗಳೊಂದಿಗೆ ಎಷ್ಟೋ ತತ್ವಗಳನ್ನು ರಚಿಸಿದ್ದಾರೆ.

ಏಕೇಶ್ವರವಾದ, ಮೂರ್ತಿಪೂಜೆಯ ಆಡಂಬರದ ಖಂಡನೆ, ಅವಿವೇಕ ನಿರಸನ, ಅಹಿಂಸಾ ಪ್ರತಿಪಾದನೆ, ಜಾತಿಭೇದ ನಿರಾಕರಣೆ ಮುಂತಾದ ವಿಷಯಗಳು ಅವರ ತತ್ತ್ವಗಳಲ್ಲಿ ಎದ್ದು ಕಾಣುತ್ತವೆ.

ವೀರಬ್ರಹ್ಮಯ್ಯನವರ ಕಾಲಜ್ಞಾನದಲ್ಲಿ ಕಾಣಬರುವ ಅಂಶಗಳಲ್ಲಿ ಒಂದೆರಡು ಓದಿರಿ.

"ಪರದೇಶಿಗರು ಬಂದು ಭರತ ಖಂಡವನ್ನೆಲ್ಲಾ ಪರಿಪಾಲಿಸುವರು. ಅವರ ಪಾಲನೆಯಲ್ಲಿ ಮನುಷ್ಯರೆಲ್ಲಾ ಓದು ಕಲಿಯುವರು. ಹೊಸ ನಾಗರಿಕತೆ ಹೆಚ್ಚುವದು. ವಿದ್ಯೆ ಅರಿವು ಬಲಿತು ಕುಲ - ಜಾತಿಗಳೆಲ್ಲಾ ಒಂದೇ ಆಗುತ್ತವೆ" (ಪುಟ. 25)

"ಉತ್ತರ ದೇಶದಲ್ಲಿ ವೈಶ್ಯಕುಲದಲ್ಲಿ ಉತ್ತಮನೊಬ್ಬ ಹುಟ್ಟುವನು. ಹಟಾತ್ತಾಗಿ ಎಲ್ಲ ದೇಶಿಗರು ಗೌರವಾದರಗಳಿಂದ ಪೂಜಿಸುವರು."

"ಲೋಕಗಳನ್ನೆಲ್ಲಾ ಒಂದಾಗಿ ಮಾಡೆ ತಕಲೀ ಹಿಡಿದವನು ಬರುವನು. ಲೋಕವನ್ನು ಹಿಡಿದೆತ್ತಿ ತಾನೊಬ್ಬನಾಗಿ ದೇಶದ ಜನರ ಒಳಿತುಗೈಯ್ಯು ಉದುರಿಹೋದಾನು" (ಪುಟ. 4)

ಮೇಲಿನ ವಾಕ್ಯಗಳು ಗಾಂಧೀಜಿಯ ಅವತಾರವನ್ನು ಸೂಚಿಸುವ ಭವಿಷ್ಯವಾಣಿಯಾಗಿಲ್ಲವೇ ?

ಸದಾಚಾರ, ಸತ್‌ಶೀಲ ಪರಂಪರೆ ಮುಂದುವರಿಯಲು ಇಂತಹ ಗ್ರಂಥಗಳು ಹೆಚ್ಚಾಗಿ ಬರಬೇಕು.

ಈ ಚರಿತ್ರೆಯನ್ನು ಮೂಲ ತೆಲುಗು ಪ್ರತಿಯಿಂದ ಶ್ರೀ ಅ. ಮ ಸಿದ್ಧಲಿಂಗಯ್ಯನವರು ಅನುವಾದ ಮಾಡಿದ್ದಾರೆ. ಅನುವಾದ ಸುಗಮವಾಗಿದೆ. ಈ ಅನುವಾದದ ಮೂಲ ತೆಲುಗು ಗ್ರಂಥವನ್ನು ತಿಳಿಸಿದ್ದರೆ ಚೆನ್ನಾಗಿತ್ತು. ವೀರಬ್ರಹ್ಮಯ್ಯನವರನ್ನು ಕುರಿತ ಗ್ರಂಥಗಳು ತೆಲುಗಿನಲ್ಲಿ ಎಷ್ಟೋ ಇವೆ.

ಆಸ್ತಿಕರೆಲ್ಲರೂ ಓದಬೇಕಾದ ಗ್ರಂಥವಿದು.

– ಜೆ. ಹನುಮಚ್ಛಾಸ್ತ್ರಿ.

———

# ಕಿಶೋರ ಜಗತ್



## ರಾಮಕಥೆ

ಆಲಿಸಿ ಕೇಳಿರಿ ಶ್ರೋತೃಗಳೆಲ್ಲರು
ರಾಮಕಥಾಮೃತಸಾರವನು
ಬಣ್ಣಿಸಿ ಪೇಳ್ವೆವು ವಿಸ್ತರದಿಂದಲಿ
ಭಕ್ತಿಯ ಗಂಗೆಯಾ ರಾಮಕಥೆ 1

ಕೋಸಲ ದೇಶದ ದಶರಥ ಭೂಮಿಪ
ಮಕ್ಕಳು ಇಲ್ಲದ ಸಲುವಾಗಿ
ಅಮರರು ಮೆಚ್ಚುವ ಪರಿಯಲಿ ಗೈದನು
ಪವಿತ್ರ ಯಜ್ಞ ಪುತ್ರಕಾಮ್ಯ 2

ಪುಣ್ಯದ ಫಲದಿಂ ಶಿವಕೃಪೆ ದೊರೆಯಿತು
ಪಡೆದನು ನಾಲ್ವರು ಮಕ್ಕಳನು
ಧೀರರು ಶೂರರು ಸದ್ಗುಣವಂತರು
ಆಗುತ ಬೆಳೆದರು ಸಂತಸದಿ 3

ಬಂದನು ಕೌಶಿಕ ಯತಿವರ ಭರದಲಿ
ಯಜ್ಞಕೆ ರಕ್ಷಣೆ ಕೋರುತಲಿ
ಮುನಿಗಳ ಕಾರ್ಯಕೆ ಭಂಗವ ತಾರದೆ
ದಶರಥ ಕಳುಹಿದ ಮಕ್ಕಳನು 4

ವಿಶೇಷ ರೀತಿಯ ನಿಗೂಢ ವಿದ್ಯೆಯ
ಪೇಳ್ದನು ಕೌಶಿಕ ಮುನಿವರನು
ಕಲಿತರು ಸನ್ನುತ ರಾಮಲಕ್ಷ್ಮಣರು
ವಿಶೇಷ ವಿದ್ಯಾಪರಿಣತಿಯ 5

ನಿಂತರು ಕುವರರು ಯಜ್ಞ ರಕ್ಷಣೆಗೆ
ಪುರಿಗಣೆ ನಿಪುಣತೆ ಶಕ್ತಿಯಲಿ
ಅಸುರರ ಕೊಲ್ಲುತ ಯಜ್ಞವ ರಕ್ಷಿಸೆ
ಸುರಿಯಿತು ಹೂಮಳೆ ಸಂಭ್ರಮದಿ 6

ಶಾಪದ ಫಲವನು ಪಡೆದಿದ್ದಾ ಸತಿ
ರಾಮನ ಪಾದದ ಸೋಂಕಿನಲಿ
ಶಿಲೆಯಿಂ ಹೊಸತನು ಪಡೆದಳು ಮುನಿಸತಿ
ಜಯ ಜಯ ರಾಮಾ ಎನ್ನುತಲಿ 7

ಮುರಿಯಿತು ಶಿವಧನು ಮೆರೆಯಿತು ಶಕ್ತಿಯು
ಜನಕಜೆ ದೊರೆತಳು ರಾಮಂಗೆ
ನಾಲ್ವರ ಮದುವೆಯು ಸಂಭ್ರಮದಿಂದಲಿ
ನಡೆದವು ಮಿಥಿಲಾ ನಗರದಲಿ 8

ರಾಮಗೆ ಪಟ್ಟವ ಕಟ್ಟಲು ಸಿದ್ಧತೆ
ನಡೆಯಿತು ನೇಮದಿ ನಗರದಲಿ
ಬಿರಿಯಿತು ವಿಘ್ನದ ಗಗನವು ಭೋರನೆ
ಸಂದಿತು ಭರತಗೆ ಅಧಿಕಾರ 9

ಶ್ರೀರಾಮ ಸೀತಾ ಲಕ್ಷ್ಮಣರಿವರು
ನಡೆದರು ದೇಸಿಗರಂದದಲಿ
ಅರಣ್ಯವಾಸವ ಗೈಯುತಲಿರಲೂ
ಬಂದಿತು ತೊಂದರೆ ಬಹುವಾಗಿ 10

ರಾವಣಸೋದರಿ ನಿಮಿತ್ತವಾದಳು
ಆಯಿತು ಸೀತಾ ಅಪಹರಣ
ಸೀತಾನ್ವೇಷಣೆ ನಡೆಯಿತು ಭರದಲಿ
ಕಪಿವರ ಧೀರರ ಸಾಹಸದಿ 11

ಶರಧಿಯ ಹಾರುತ ಮಾರುತಿ ಬಂದನು
ಲಂಕೆಗೆ ಬೆಂಕಿಯು ಬಿದ್ದಾಯ್ತು
ಅಶೋಕವನದಲಿ ಶೋಕಿಸುತಿದ್ದಾ
ಸೀತೆಯ ಸುದ್ದಿಯು ತಿಳಿದಾಯ್ತು 12

ಶರಧಿಗೆ ಸೇತುವೆ ನಿರ್ಮಿತವಾಯಿತು
ಕಪಿವರ ಸೈನ್ಯವು ಧಾಳಿಡಲು
ರಾವಣೇಶ್ವರನ ವೈಭವದುರ್ಗನು
ಪಲ್ಲಟಗೊಳಿಸಿತು ದುಷ್ಕರ್ಮ 13

ನಡೆಯಿತು ಭೀಕರ ಕಾಳಗ ಲಂಕಾ
ನಗರದ ಅಧಿಪತಿ ಎದುರಿನಲಿ
ಸಹಸ್ರ ಸಂಖ್ಯೆಯ ರಕ್ಕಸ ಸೇನೆಯು
ಸೋಲನ್ನಪ್ಪಿತು ರಣದಲ್ಲಿ 14

ಸಿಡಿಲಿನ ಘೋಷದ ಅಸ್ತ್ರ ಶಸ್ತ್ರಗಳು
ಮೊಳಗಲು ಧರೆಯೇ ಕಂಪಿಸಿತು
ನಿರ್ನಾಮವಾಯಿತು ಲಂಕಾನಗರವು
ಬೆಂದಿತು ರಕ್ಕಸ ಸಂತತಿಯು 15

ದಶಾಸ್ಯನಳಿದನು ದಿವಿಜರು ನಲಿದರು
ಲೋಕವು ಪಡೆಯಿತು ಶಾಂತಿಯನು
ರಾಮಚಂದ್ರನು ಜಾನಕಿಯೊಂದಿಗೆ
ಪುಷ್ಪಕವೇರಿದನಯೋಧ್ಯೆಗೆ 16

ನಂದಿ ಗ್ರಾಮದಲಿ ಭರತನಿದ್ದನು
ರಾಮನ ಬರವಿಗೆ ಕಾತರಿಸಿ
ರಾಮನ ಬರವನು ತಿಳಿಸಿದ ಹನುಮನು
ನಡೆದ ಕಥೆಯನು ವಿಸ್ತರಿಸಿ 17

ನಡೆಯಿತು ಪಟ್ಟವು ಸೀತಾರಾಮಗೆ
ಮೆರೆಯಿತು ಕೀರ್ತಿಯು ಎಲ್ಲೆಡೆಯು
ರಾಮನ ಕಥೆಯಿದು ವೈಷ್ಣವ ಲೀಲೆಯು
ಶುಭ ಗತಿ ಶುಭ ಮತಿ ನೀಡುವುದು 18

ಪಿತೃವಾಕ್ಯಗಳ ಪರಿಪಾಲನೆಗೆ
ಭ್ರಾತೃತ್ವದ ಘನ ಹಿರಿತನಕೆ
ಪಾತಿವ್ರತ್ಯದ ಧರ್ಮಕೆ ವಿಜಯವ
ಸಾರುವುದೀ ಕಥೆ ಲೋಕಕ್ಕೆ 19

– ಪ್ರೊ॥ ಡಿ. ಟಿ. ರಂಗಸ್ವಾಮಿ

ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ

# ಯಾತ್ರಿಕ ವಸತಿ ಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ.

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

## ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' × 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳದೊಂದಿಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

## ರಾಮುಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ.

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' × 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ!

## ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 60 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

ಕೂಡಲೇ ಬರೆಯಿರಿ – ಕಾರ್ಯನಿರ್ವಹಣಾಧಿಕಾರಿ
ತಿ. ತಿ. ದೇ. ತಿರುಪತಿ

# ಗೃಹಲಕ್ಷ್ಮಿ

## ಕಾತ್ಯಾಯನಿ

ಶಕ್ತಿರೂಪಿಣಿಯರಲ್ಲಿ ಕಾತ್ಯಾಯನಿಯು ರೌದ್ರಾವೇಶದವಳು. ಈಕೆಯು ಜಗಜ್ಜನನಿಯಾಗಿದ್ದು, ಆದಿಶಕ್ತಿಯಾಗಿರುವಳು.

ಹನ್ನೊಂದು ಪಾರ್ವತಿಯರಲ್ಲಿ ಈಕೆಯು ಒಬ್ಬಳು. ಅಮರ ಕೋಶದಲ್ಲಿ ಈಕೆಯನ್ನೇ

ಉಮಾ ಕಾತ್ಯಾಯನೀ ಗೌರೀ
ಕಾಳೀ ಹೈಮವತೀಶ್ವರೀ
ಶಿವಾಭವಾನೀ ರುದ್ರಾಣೀ
ಶರ್ವಾಣೀ ಸರ್ವಮಂಗಲಾ
ಅಪರ್ಣಾ ಪಾರ್ವತೀ ದುರ್ಗಾ
ಮೃಡಾಣೀ ಚಂಡಿಕಾಂಬಿಕಾ।

ಎಂದು ಕರೆಯಲಾಗಿದೆ. ಅಂತೆಯೇ ಈಕೆಯನ್ನು ಈಶ್ವರನ ಪತ್ನಿಯೆಂದು ಗುರ್ತಿಸಲಾಗಿದೆ.

ದೇವೀ ಭಾಗವತದಲ್ಲಿ ಈಕೆಯನ್ನು ತಮೋಗುಣಾಭಿಮಾನಿಯಾದ ಲಕ್ಷ್ಮಿಯ ರೂಪಾಂತರವಾದ ಆದಿಶಕ್ತಿ ಎಂದು ವಿವರಿಸಲಾಗಿದೆ. ದುರ್ಗಮನೆಂಬ ಅಸುರನನ್ನು ಕೊಂದ ಕಾರಣ ಈಕೆಯನ್ನು ದುರ್ಗೆ ಎಂದು ಕರೆದರು. ಅಜ್ಞಾತವಾಸಕ್ಕೆ ಹೊರಡುವುದಕ್ಕೆ ಮುಂಚೆ ಯುಧಿಷ್ಠಿರನು ಈಕೆಯನ್ನು ಹಾಡಿ, ಹೊಗಳಿದ. ಮಹಾಭಾರತದ ಯುದ್ಧಾರಂಭದಲ್ಲಿ ಅರ್ಜುನನು ಈಕೆಯನ್ನು ಸ್ತುತಿಸಿ, ಒಲಿಸಿಕೊಂಡ.

ಇದೇ ಭಾಗವತದಲ್ಲಿ ಕಾತ್ಯಾಯನಿಯ ಬಗ್ಗೆ ಮತ್ತೊಂದು ಕಥೆಯೂ ಇದೆ.

ರಂಭ ಎನ್ನುವವನೊಬ್ಬ ರಾಕ್ಷಸನು ಬಹಳ ಹಿಂದೆ ಇದ್ದ. ಇವನು ಅಗ್ನಿ (ಶಿವ)ಯನ್ನು ಕುರಿತು ತಪಸ್ಸು ಮಾಡಿದ. ಆತ ಪ್ರತ್ಯಕ್ಷನಾಗಿ, "ದೇವತೆಗಳನ್ನು ಸದೆ ಬಡಿಯುವಂತಹ ಮಗನು ಜನಿಸುವ. ಆದರೆ ಮೊದಲು ನಿನಗೆ ಯಾವ ಜಂತು ಕಣ್ಣಿಗೆ ಬಿದ್ದು ನೀನು ಕ್ರೀಡಿಸುವೆಯೊ ಅಂತಹ ಮಗನೇ ಹುಟ್ಟುವ" ಎಂದು ವರವನ್ನು ಪ್ರಸಾದಿಸಿದ. ರಂಭನು ಒಂದು ಮಹಿಷಿ (ಎಮ್ಮೆ)ಯನ್ನು ಕಂಡು ಕ್ರೀಡಿಸಲಾಗಿ ಮಹಿಷಾಕೃತಿಯ ಅಸುರ ಜನಿಸಿದ. (ಇವನನ್ನು ದಿತಿಯ ಮಗನೆಂದೂ ಗುರ್ತಿಸಲಾಗಿದೆ.)

ಇವನೇ ಮಹಿಷಾಸುರ. ಬಲಿಷ್ಠವಾದ ಕೊಂಬುಗಳು ಮತ್ತು ಮಾನವ ದೇಹದ ಈ ರಾಕ್ಷಸನು ತಂದೆಯ ಉಪದೇಶದಂತೆ ತಪಸ್ಸು ಮಾಡಲು ಪ್ರಾರಂಭಿಸಿದ. ಇವನ ಅತ್ಯಂತ ಉಗ್ರವಾದ ತಪಸ್ಸು ಮಾಡಿ, ಶಿವನನ್ನು ಮೆಚ್ಚಿಸಿ, ತನಗೆ ಮರಣವಿಲ್ಲದಂತೆ ಅನುಗ್ರಹಿಸಬೇಡಿದ. ಆಗ ಶಿವನು 'ಅದು ಸಾಧ್ಯವಿಲ್ಲ, ಹುಟ್ಟಿದವರಿಗೆ ಮರಣವು ತಪ್ಪಿದ್ದಲ್ಲ' ಎನ್ನಲು, ಮಹಿಷಾಸುರನು ತನಗೆ ಹೆಂಗಸಿನಿಂದಲೇ ಮರಣವಾಗಲಿ ಎಂದು ಪ್ರಾರ್ಥಿಸಿದ. ಶಿವನು 'ತಥಾಸ್ತು' ಎಂದು ಕಣ್ಮರೆಯಾದ.

ಆದರೆ ಮಹಿಷನ ದುರುದುಂಬಿತನ ತಡೆಯಲು ಅಶಕ್ಯವಾಯಿತು. ಸುರಾಸುರರಿಂದ ಸಂಪೂರ್ಣ ಅವಧ್ಯನಾದ. ಒಂದು ನೂರು ವರ್ಷಗಳ ವರೆಗೆ ಯುದ್ಧಮಾಡಿ ದೇವತೆಗಳನ್ನೆಲ್ಲ ಸೋಲಿಸಿದ; ಇಂದ್ರನಿಂದ ವಜ್ರ, ಯಮನಿಂದ ದಂಡ, ವರುಣನಿಂದ ಪಾಶಗಳನ್ನು ಕಿತ್ತುಕೊಂಡು ವ್ಯರ್ಥ ಮಾಡಿದ. ದೇವತೆಗಳು ಸ್ವರ್ಗವನ್ನು ಬಿಟ್ಟೋಡಿದರು. ಇದೇ ರಾಜಧಾನಿಯಿಂದ ಮಹಿಷಾಸುರನು ಆಡಳಿತ ನಡೆಸಲು ಪ್ರಾರಂಭಿಸಿದನು.

ದೇವತೆಗಳೆಲ್ಲರೂ ಹೋಗಿ ಬ್ರಹ್ಮನನ್ನು ಪ್ರಾರ್ಥಿಸಿದರು. ಅವರನ್ನೆಲ್ಲ ಕರೆದುಕೊಂಡು ಬ್ರಹ್ಮನು ಕೈಲಾಸವನ್ನು ಸೇರಿದನು. ಅಲ್ಲಿಂದ ಅವರೆಲ್ಲ ಕ್ಷೀರಸಾಗರವನ್ನು ತಲುಪಿದರು. ಎಲ್ಲರ ಎದುರಿಗೆ ಗರುಡಧ್ವಜದಿಂದ ಶೋಭಿತನಾದ ಮೇಘಶ್ಯಾಮನು ಕಾಣಿಸಿಕೊಂಡನು. ಮಹಿಷಾಸುರನ ಅತ್ಯಾಚಾರದ ವಿಷಯಗಳನ್ನು ಆಲಿಸಿದ ಕೂಡಲೆ, ವಿಷ್ಣುವಿನ ಮುಖದಲ್ಲಿ ಕೋಪವು ಕಾಣಿಸಿಕೊಂಡಿತು. ಆತನ ಮುಖದಿಂದ ಒಂದು ರೀತಿಯ ತೇಜಸ್ಸು ಹೊರ ಬಂದಿತು. ಇದನ್ನು ನೋಡಿದ ಕೈಲಾಸಾಧಿಪತಿ ಹಾಗೂ ಬ್ರಹ್ಮರೂ ಕೋಪೋದ್ದೀಪ್ತರಾದರು. ದೇವತೆಗಳೂ ಕೂಡ ಕ್ರೋಧಾಗ್ನಿಯಿಂದ ಜ್ವಲಿಸತೊಡಗಿದರು. ಆ ಜ್ವಾಲೆ, ಆ ತೇಜಸ್ಸು ದಿಗಂತಗಳಲ್ಲಿ ವ್ಯಾಪ್ತವಾಗಿ ಹರಡಿತು. ಸಮಸ್ತ ಬ್ರಹ್ಮಾಂಡವೂ ಮಹಾನ್ ಪ್ರಭೆಯೊಂದರಿಂದ ಆವೃತವಾಯಿತು. ನೋಡ ನೋಡುತ್ತ ಈ ಭೀಷಣ ತೇಜೋರಾಶಿಯು ಘನೀಭೂತವಾಗತೊಡಗಿತು. ಕೂಡಲೇ ಆ ತೇಜೋರಾಶಿಯಿಂದ ಉದ್ದೀಪಿತವಾದ ತೇಜೋಮಯ ನಾರೀಮೂರ್ತಿಯೊಂದು ಆವಿರ್ಭೂತವಾಯಿತು. ಆಕೆಯ ದಿವ್ಯ ತೇಜಸ್ಸನ್ನು ದರ್ಶಿಸಿದ ದೇವಾದಿದೇವತೆಗಳು ಹಾಗೂ ಜಗನ್ನಿಯಾಮಕರುಗಳಿಗೆ ಆನಂದದ ಮಿತಿಯೇ ಇಲ್ಲವಾಯಿತು.



ಅವರೆಲ್ಲರೂ ವಿಶ್ವವಿಭಾವಿನೀ, ವಿಶ್ವಜನನೀ, ದಾನವ ದಲಿನೀ, ಭಗವತಿ ದುರ್ಗೆಯನ್ನು ನೋಡಿ ತಮ್ಮ ವಸನ-ಭೂಷಣಗಳು, ಅಸ್ತ್ರ-ಶಸ್ತ್ರಾದಿಗಳನ್ನು ಅರ್ಪಿಸಿ, ಪೂಜಿಸಿ, ಆಕೆಯನ್ನು ಮಹಾಶಕ್ತಿಯನ್ನಾಗಿ ಮಾಡಿದರು.

ಆಶ್ವಯುಜ ಕೃಷ್ಣ ಚತುರ್ಥಿಯಂದು ಮಹಾಶಕ್ತಿಯು ಸ್ವರೂಪಧಾರಣೆ ಮಾಡಿದಳು. ಇದೇ ಮಾಸದ ಶುಕ್ಲಪಕ್ಷ ಸಪ್ತಮಿ, ಅಷ್ಟಮಿ ಮತ್ತು ನವಮಿಯಂದು ಮಹರ್ಷಿ ಕಾತ್ಯಾಯನನು ಈಕೆಯನ್ನು ಪೂಜಿಸಿ, ಅರ್ಚಿಸಿದನು. ಮಹರ್ಷಿ ಕಾತ್ಯಾಯನನ ಪ್ರಥಮ ಪೂಜೆಯನ್ನು ಸ್ವೀಕರಿಸಿದ್ದರಿಂದ ಈಕೆಯ ಹೆಸರು ಕಾತ್ಯಾಯನಿ ಎಂದಾಯಿತು.

ಇದೇ ಆಶ್ವಯುಜ ಶುಕ್ಲ ದಶಮಿಯಂದು ಮಹಾಶಕ್ತಿಯು ಮಹಿಷಾಸುರನನ್ನು ಯುದ್ಧಕ್ಕೆ ಆಹ್ವಾನಿಸಿದಳು. ಎತ್ತರದ ದನಿಯಲ್ಲಿ ನಿನಾದ ಮಾಡಿ, ಅಟ್ಟಹಾಸ ಮಾಡಿದಳು. ಇದು ಅನಂತ ಆಕಾಶದಲ್ಲಿ ವ್ಯಾಪ್ತವಾಗಿ, ಭಯಾನಕ ಶಬ್ದ ತರಂಗಗಳನ್ನು ಎಬ್ಬಿಸಿತು.

ಮಹಿಷಾಸುರನು ಚಕಿತನಾಗಿ ನೋಡಿದ. ಆದರೆ ಅವನು ನೋಡಿದ್ದೇನು- ಆಕಾಶ ಪಾತಾಳಗಳನ್ನು ತನ್ನ ಪ್ರಬಲ ಜ್ಯೋತಿಗಳಿಂದ ಜಾಜ್ವಲ್ಯಮಾನಗೊಳಿಸುತ್ತಿರುವ ಆದ್ಯಶಕ್ತಿಯಾದ ಸಹಸ್ರಭುಜಗಳಿಂದ, ವಿವಿಧ ಆಯುಧಗಳಿಂದ ಕೂಡಿದ ದೇವೀ ಭಗವತಿಯನ್ನು.

ದಿಶೋ ಭುಜ ಸಹಸ್ರೇಣ
ಸಮಂತಾ ದ್ವ್ಯಾಪ್ಯ ಸಂಸ್ಥಿತಾಮ್ ।

ಘೋರ ಯುದ್ಧದಲ್ಲಿ, ಮಹಿಷಾಸುರನನ್ನು ದೇವಿ ಭಗವತಿಯು ಸಂಹಾರ ಮಾಡಿದಳು.

'ರಘುಸುತ'

ಇದರಿಂದ ಆಕೆಯ ಹೆಸರು ಉಗ್ರ ಚಂಡೀ ಎಂದಾಯಿತು.

ಎರಡನೆ ಕಲ್ಪದಲ್ಲಿ ಮತ್ತೆ ಮಹಿಷಾಸುರನು ಬೇರೊಂದು ರೂಪದಲ್ಲಿ ಜನ್ಮ ತಳೆದನು. ಈ ಸಲ ಕಾತ್ಯಾಯನಿಯು ಅವನನ್ನು ಭದ್ರಕಾಳಿಯ ರೂಪದಲ್ಲಿ ಸಂಹಾರ ಮಾಡಿದಳು.

ಮೂರನೆಯ ಕಲ್ಪದಲ್ಲಿಯೂ ಆ ರಾಕ್ಷಸನು ಜನ್ಮ ತಳೆದನು. ಆಗ ಆಕೆಯು ದುರ್ಗಾ ಸ್ವರೂಪವನ್ನು ಪಡೆದು ಆ ದೈತ್ಯನನ್ನು ಸಂಹಾರ ಮಾಡಿದಳು.

ಈ ರೀತಿಯಲ್ಲಿ ದುಷ್ಟಶಿಕ್ಷಣ, ಶಿಷ್ಟರಕ್ಷಣೆ ಮಾಡಿದ ಕಾತ್ಯಾಯನಿಯ ಶಾಂತ ಸ್ವರೂಪದ ಕತೆಯನ್ನೂ ಹೇಳುವರು. ಮತ್ಸ್ಯ ಮತ್ತು ಮಾರ್ಕಂಡೇಯ ಪುರಾಣಗಳಲ್ಲಿ ವಿವರಿಸಿರುವಂತೆ ಕಾತ್ಯಾಯನಿಯು ಮಹಾಶಕ್ತಿಯಾದಮೇಲೆ ಪ್ರಶಾಂತರೂಪವನ್ನು ಪಡೆದಳು. ಇದರಿಂದ ಆಕೆಯನ್ನು ತ್ರಿಪುರಸುಂದರಿ ಎಂದು ಕರೆದರು. ಅತ್ಯಂತ ರೂಪವತಿಯಾದ ಈಕೆಯು ಹಿಮವತ್ಪ್ರಾಂತದಲ್ಲಿ ಕ್ರೀಡಿಸುತ್ತಿದ್ದುದನ್ನು ನಾರದನು ನೋಡಿ, ಮಹಿಷಾಸುರನಲ್ಲಿಗೆ ಹೋಗಿ ಈ ವಿಷಯವನ್ನು ಹೇಳಿದ. ಮಹಿಷನು ಆಕೆಯನ್ನು ನೋಡಿ ಮೋಹಿತನಾಗಿ ತನ್ನನ್ನು ಒಲಿಯಲು ಹೇಳಿದ. ಯುದ್ಧಮಾಡಿ ತನ್ನನ್ನು ಸೋಲಿಸಿದವನನ್ನೇ ಮದುವೆಯಾಗುವುದಾಗಿ ದೇವಿ ಹೇಳಿದಳು. ರಾಕ್ಷಸನು ಯುದ್ಧಕ್ಕೆ ಸಿದ್ಧನಾದ. ಕೂಡಲೆ ದೇವಿಯು ರೌದ್ರರೂಪವನ್ನು ತಾಳಿ, ಸಮಸ್ತ ಅಸ್ತ್ರಶಸ್ತ್ರಗಳ ಸಹಿತ ಸಿಂಹವಾಹಿನಿಯಾಗಿ ಅವನೊಂದಿಗೆ ಯುದ್ಧಮಾಡಿ, ಅವನನ್ನು ಸಂಹಾರ ಮಾಡಿದಳು.

ಈ ರೀತಿಯಲ್ಲಿ ಸ್ವಶಕ್ತಿಯ ಮದದಿಂದ ದುರಾಚಾರ ಮಾಡುವವರು ಪ್ರಾರಂಭದಲ್ಲಿ ಸಂತೋಷ, ಸೌಖ್ಯಗಳಿಂದ ಇದ್ದರೂ ನಂತರ ತಮ್ಮ ಪಾಪದ ಫಲವನ್ನು ಅನುಭವಿಸಿಯೇ ಅನುಭವಿಸುತ್ತಾನೆ — ಎನ್ನುವುದಕ್ಕೆ ಮಹಿಷಾಸುರನ ಕಥೆಯೇ ಉದಾಹರಣೆ. ಆದರೆ ಅವನ ಶಿವೋಪಾಸನೆಯು ಅವನನ್ನು ದೇವಿಯ ಪಾದದ ಬಳಿ ಉಳಿಯುವಂತೆ ಮಾಡಿ, ದೇವಿಯ ಪೂಜೆಯೊಂದಿಗೆ ಅವನ ಪೂಜೆಯೂ ಆಗುವಂತಾಯಿತು.

ಆಳವಾಗಿ ಅಧ್ಯಯನ ಮಾಡಿ ನೋಡಿದರೆ ಈ ಈ ಭಗವತಿಯ ಭಾವಾರ್ಥವು ಹೆಚ್ಚು ಅರ್ಥಗರ್ಭಿತವೂ, ಸೂಚ್ಯವಾದುದೂ ಆಗಿರುತ್ತದೆ.

ಜಗನ್ನಿಯಾಮಕನಾದ ಪರಮೇಶ್ವರನು ತನ್ನಲ್ಲಿ ತಾನೆ ಪರಿಪೂರ್ಣನು. ಸೃಷ್ಟಿ, ಸ್ಥಿತಿ, ಲಯಗಳನ್ನು ನೋಡಿಕೊಳ್ಳುವ ಈತನು 'ಜನ್ಮಾದ್ಯಸ್ಯಯತಃ' ಎನ್ನುವಂತೆ ಸ್ತ್ರೀ ಮತ್ತು ಪುರುಷ – ಎರಡು ರೂಪಗಳಲ್ಲಿಯೂ ಕಾಣಿಸಿಕೊಳ್ಳುತ್ತಾನೆ. 'ತ್ರ್ಯಂಬಕಂ ಯಜಾಮಹೇ' ಎನ್ನುವುದರಲ್ಲಿ ಷಡ್ವಿಂಶ ಬ್ರಾಹ್ಮಣದಲ್ಲಿ ಹೇಳಿರುವಂತೆ 'ತ್ರ್ಯಂಬಕ' ಪದದ ವ್ಯುತ್ಪತ್ತಿಯು 'ಸ್ತ್ರೀ' 'ಅಂಬಾ' 'ಸ್ವಸಾ ಯಸ್ಯ' ಎನ್ನುವುದರಿಂದ ಆಗಿದೆ. ತನ್ನನ್ನು ತಾನು ಸ್ತ್ರೀತ್ವದೊಂದಿಗೆ ಪ್ರಕಾಶಗೊಳ್ಳುತ್ತಾನೆ. ಇದೇ ಅರ್ಧನಾರೀಶ್ವರ ರೂಪ. ಲೌಕಿಕ ವ್ಯವಹಾರದಲ್ಲಿ ಇದು ಸೋದರಿಯ ಸ್ವರೂಪದ್ದಾಗಿರುತ್ತದೆ. ಸ್ತ್ರೀ ಶಬ್ದದಲ್ಲಿನ 'ಸ' ಕಾರ ಲೋಪವಾಗುವುದರಿಂದ 'ತ್ರ್ಯಂಬಕ' ಪದ ಹುಟ್ಟುತ್ತದೆ. ಋಗ್ವೇದದಲ್ಲಿ ತಿಳಿಸಿರುವಂತೆ 'ಗೌರೀಮಿಮಾಂ ಸಲಿಲಾನಿ ತಕ್ಷತಿ' ಎನ್ನುವಂತೆ ಇದು 'ಗೌರೀ' ಎಂದಾಗುತ್ತದೆ.

ಈ ವೇದ ಮಂತ್ರಗಳ ತಾತ್ಪರ್ಯವೇನೆಂದರೆ ಆ ಜಗನ್ನಿಯಾಮಕನು ಸ್ತ್ರೀ–ಪುರುಷ ರೂಪಗಳಲ್ಲಿ ಮಾತಾ–ಪಿತರ ಸಮಾನವಾದ ಸುಖವನ್ನು ಕೊಡುವನು. ಇವನು 'ತ್ರಿನೇತ್ರ'ನೂ ಹೌದು. ಅಂದರೆ ಮೂರು ಕಾಲಗಳಲ್ಲಿ ನಡೆಯುವ ಬ್ರಹ್ಮಾಂಡದ ಎಲ್ಲ ವಿಷಯಗಳನ್ನೂ ಅರಿತಿರುವವನು ಎಂದರ್ಥ. ಆದುದರಿಂದ ಮಹಾಕಾಳೀ ದುರ್ಗಾಳೂ ಕೂಡ 'ತ್ರಿನೇತ್ರಾ'ಳು ಆಗಿರುವಳು. ಯೋಗ ಸೂತ್ರದಲ್ಲಿ ಹೇಳಿರುವಂತೆ ತತ್ರ ಸರ್ವಜ್ಞಾತಿಶಯೋ ಬೀಜವಮ್' ಎನ್ನುವಂತೆ ಆಕೆ ಸರ್ವಜ್ಞಳು. ಮಿಂಚಿನ ಸಮಾನ ಹೊಳೆಯುವವಳೂ, ಸಿಂಹಾಸನಾರೂಢಳಾಗಿ ಧನು, ಬಾಣ, ಚಕ್ರಧರಳೂ ಆಗಿರುವಳು.

ವಿದ್ಯುದ್ದಾಮ ಸಮಪ್ರಭಾಂ  
ಮೃಗಪತಿಸ್ಕಂಧ ಸ್ಥಿತಾಂ ಭೀಷಣಾಂ  
ಕನ್ಯಾಭಿಃ ಕರವಾಲಖೇಟ  
ವಿಲಸದ್ಧಸ್ತಾಭಿರಾಸೇವಿತಾಮ್ ।  
ಹಸ್ತೈಶ್ಚಕ್ರಗದಾಸಿ ಶಾತ ವಿಶಿಖಾಂ  
ಶ್ಚಾಪಂ ಗುಣಂ ತರ್ಜನೀ  
ಬಿಭ್ರಾಣಾಮನಲಾತ್ಮಿಕಾಂ  
ಶಶಿಧರಾಂ ದುರ್ಗಾಂ ತ್ರಿನೇತ್ರಾಂ ಭಜೇ ॥

ಯಾವ ವೀರನು ಪುರುಷನಾಗಿರುವನೊ ಅವನು ಸಿಂಹನೂ ಆಗಿರುವನು. ಅಂತಹವನ ಮೇಲೆ ಮಹಾಕಾಳಿಯು ಸವಾರಿ ಮಾಡುವಳು. ಲಲಾಟದಲ್ಲಿನ ಚಂದ್ರಮನು ಭಕ್ತರಿಗೆ ಆನಂದ ಮತ್ತು ಪ್ರಕಾಶವನ್ನು ನೀಡುವನು. ಆಕೆ ಕೋಪಗೊಂಡಾಗ ರಾಕ್ಷಸರ ಮೇಲೆ ಚಕ್ರವನ್ನು ಚಲಾಯಿಸುವಳು. ಸಂಸಾರ ಚಕ್ರವು ತನ್ನಲ್ಲಿನ ಪಾಪಗಳೊಂದಿಗೆ ಹೋರಾಡುತ್ತಾ ನಷ್ಟವಾಗುತ್ತಾ ಹೋಗುತ್ತದೆ. ಇದು ಭಗವತಿಯ ಪರೋಕ್ಷ ಚಕ್ರ ಸಂಚಾಲನವಾಗಿದೆ. ತೋಟಗಾರನು ತನ್ನ ತೋಟದಲ್ಲಿನ ಕೊಳೆತ, ಕೆಟ್ಟಗಿಡಗಳನ್ನು ಕಿತ್ತು ಬಿಸಾಡಿ, ಅದರ ಶೋಭೆಯನ್ನು ಹೆಚ್ಚಿಸುವಂತೆ, ದುರ್ಗಾಮಾತೆಯು ದುಷ್ಟರನ್ನು ಶಿಕ್ಷಿಸಿ, ಉತ್ತಮರಿಗೆ ರಕ್ಷಣೆ ಕೊಡುವಳು.

ನಾರದ ಪುರಾಣ, ಸ್ಕಂದ ಪುರಾಣಗಳಲ್ಲಿಯೂ ದುರ್ಗಾದೇವಿಯ ಸ್ತೋತ್ರಗಳಿವೆ–

ಸಹಸ್ರವದನಾ ಸಂಧ್ಯಾ  
ಸಾಕ್ಷಿಣೀ ಶಾಂಕರೀ ದ್ಯುತಿಃ  
ಭಾರ್ಗವೀ ವಾರುಣೀ ವಿದ್ಯಾ  
ಧರಾ ಧಾತ್ರೀಸುರಾರ್ಚಿತಾ ॥

(ಆಧಾರಗಳಿಂದ)

---

## ಪ್ರತ್ಯೇಕ ಕಲ್ಯಾಣೋತ್ಸವ

## ಶ್ರೀ ವೇಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

ಆರ್ಜಿತ ಕಲ್ಯಾಣೋತ್ಸವ ಮಾಡಿಸುವ ಆಸಕ್ತ ಭಕ್ತರಿಗೆ ಮತ್ತೊಂದು ಸುವಾರ್ತೆ ಎಂದರೆ; ಕಲ್ಯಾಣೋತ್ಸವವನ್ನು ರೂ. 500–00 ಶುಲ್ಕದಲ್ಲಿ ನಡೆಸುವ ಕ್ರಮವನ್ನು ಜಾರಿಗೆ ತರಲಾಗಿರುವುದು. ಇದರಲ್ಲಿ ಗೃಹಸ್ಥರನ್ನೂ ಸೇರಿಸಿ ಐದು ಜನರಿಗೆ ಮಾತ್ರ ಪ್ರವೇಶ. ಮಿಕ್ಕಂತೆ ಎಲ್ಲವೂ ರೂ. 2000–00 ಕಲ್ಯಾಣೋತ್ಸವದಂತೆಯೇ.

ಆಸ್ತಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕೆಂದು ವಿನಂತಿ.

**ತಿ. ತಿ. ದೇ.**

ಕುಂಭೇ ಪುನರ್ವಸೋ ಜಾತಂ
ಕೇರಳೇ ಚೋಳ ಪಟ್ಟಣೇ ।
ಕೌಸ್ತುಭಾಂಶಂ ಧರಾಧೀಶಂ
ಕುಲಶೇಖರ ಮಾಶ್ರಯೇ ॥

ಹೀಗೆ ಸ್ಮರಿಸಲ್ಪಡುವ ವ್ಯಕ್ತಿ ಓರ್ವ ಭಕ್ತ ಶಿರೋಮಣಿ. ಅವರೇ ಕುಲಶೇಖರಾಳ್ವಾರರು. ಇವರು ತಮ್ಮ ಪೂರ್ವಾಶ್ರಮದಲ್ಲಿ ರಾಜರಾಗಿದ್ದು ರಾಜಭೋಗ ಅನುಭವಿಸಬೇಕಾದವರು. ಹಂತ ಹಂತವಾಗಿ ಭಗವಂತನ ಧ್ಯಾನ ಸಂಕೀರ್ತನದಲ್ಲಿ ತೊಡಗಿ ಭಗವದ್ಭಕ್ತಿಯಲ್ಲಿ ತಲ್ಲೀನರಾಗಿ ಕೊನೆಗೊಮ್ಮೆ ರಾಜಪದವಿಯನ್ನೇ ತೊರೆದು ಭಕ್ತ ಜೀವನ ನಡೆಸಿ ಜೀವನ್ಮುಕ್ತರಾದವರು. ಪ್ರಥಮತಃ ಮಾನವರಲ್ಲಿ ದೈವ ಧರ್ಮಾದಿಗಳ ಬಗ್ಗೆ ಕುತೂಹಲ ಮಾತ್ರವೇ ಇರುತ್ತದೆ. ಅದನ್ನು ಹಾಗೆಯೇ ಬೆಳೆಯಗೊಟ್ಟರೆ ಅದು ಶ್ರದ್ಧೆಯಾಗಿ, ಇದೇ ಶ್ರದ್ಧೆಯು ಪರಿಪಕ್ವ ಹಾಗೂ ನಿಶ್ಚಿತರೂಪ ಪಡೆದು ಭಕ್ತಿಯಾಗಿ ನೆಲೆನಿಲ್ಲುತ್ತದೆ ಎನ್ನುತ್ತಾರೆ ಅನುಭಾವಿಗಳು. ಇಂತಹ ಬದುಕನ್ನು ನಡೆಸಿದವರು ಈ ಮಹಾನುಭಾವರು. ಅದರ ಜೊತೆ ಜೊತೆಯಲ್ಲಿಯೇ ತಮ್ಮ ಅಂತರಂಗದ ಭಕ್ತಿಯ ಅನುಭಾವವನ್ನು ವಾಙ್ಮಯ ರೂಪದಲ್ಲಿ ಹರಿಸಿ ಅದಕ್ಕೊಂದು ಶಾಶ್ವತ ಅಸ್ತಿತ್ವವಿತ್ತಿದ್ದಾರೆ. ಹೀಗೆ ಇವರ ದಿವ್ಯ ಜಿಹ್ವೆಯಿಂದ ಹರಿದು ಬಂದಿರುವ ಸ್ತೋತ್ರಗಳಲ್ಲಿ 'ಮುಕುಂದಮಾಲಾ' ಸ್ತೋತ್ರವು ಬಹಳ ಭಕ್ತಿರಸ ಪೂರಿತವಾಗಿದೆ. ಇವರು ತಮ್ಮ ಆರಾಧ್ಯ ದೈವವಾದ ಭಗವಾನ್ ಶ್ರೀಕೃಷ್ಣನ ಮಹಿಮೆಯನ್ನೂ, ಅವನನ್ನು ಅರ್ಚಿಸಬೇಕಾದ ರೀತಿಯನ್ನೂ ಅದರಿಂದ ದೊರೆಯುವ ದಿವ್ಯಾನುಭವವನ್ನೂ ಈ ಸ್ತೋತ್ರಗಳಲ್ಲಿ ಎಳೆ ಎಳೆಯಾಗಿ ಚಿತ್ರಿಸಿದ್ದಾರೆ.

'ಮುಕುಂದಮಾಲಾ ಸ್ತೋತ್ರವು' ಈ ಭಕ್ತರ ಭಕ್ತಜೀವನಕ್ಕೆ ಹಿಡಿದ ರನ್ನಗನ್ನಡಿಯೇನೋ ಎಂಬಂತೆ ಬಹಳ ಅರ್ಥಪೂರ್ಣವಾಗಿ ಹೊರಬಂದಿದೆ. ಒಂದೊಂದು ಸ್ತೋತ್ರವೂ ದಿವ್ಯ ಅನುಭಾವವನ್ನುಂಟುಮಾಡುವಂತಿದೆ. ಕೇವಲ ದೈವನಾಮಸ್ಮರಣೆಯಿಂದಲೇ ತೃಪ್ತಿ ಕಾಣುವ ಜೀವ ಇವರದು. ಆದ್ದರಿಂದ ತಮಗಾಧಾರವಾದ ಆ ದೈವವು ಸದಾಕಾಲವೂ ಉಚ್ಛ್ರಾಯ ಮಾನವಾಗಿರಬೇಕು. ಇಲ್ಲದಿದ್ದರೆ ಆಶ್ರಿತ ಜನರನ್ನು ಕಾಪಾಡುವ ಬಗೆ ಹೇಗೆ! ಅದಕ್ಕಾಗಿ ಆ ದೈವವನ್ನು ಕುರಿತು–

ಜಯತು ಜಯತು ದೇವೋ
ದೇವಕೀ ನಂದನೋಽಯಂ ।
ಜಯತು ಜಯತು ಕೃಷ್ಣೋ
ವೃಷ್ಣಿ ವಂಶ ಪ್ರದೀಪಃ ॥

# ಮುಕುಂದಮಾಲಾ

ಜಯತು ಜಯತು ಮೇಘ
ಶ್ಯಾಮಲಃ ಕೋಮಲಾಂಗಃ ।
ಜಯತು ಜಯತು ಪೃಥ್ವೀ
ಭಾರನಾಶೋ ಮುಕುಂದಃ ॥

ಎಂದು ಜಯ ಘೋಷವನ್ನೇ ಮಾಡಿದ್ದಾರೆ. ಅದರೊಂದಿಗೆ ಅತ್ಯಂತ ವಿನೀತರಾಗಿ–

ಮುಕುಂದ ಮೂರ್ಧ್ನಾ ಪ್ರಣಿಪತ್ಯ ಯಾಚೇ
ಭವಂತ ಮೇಕಾಂತಮಿಯನ್ತಮರ್ಥಮ್ ।
ಅವಿಸ್ಮೃತಿಃ ತ್ವಚ್ಚರಣಾರವಿಂದೇ
ಭವೇ ಭವೇ ಮೇಽಸ್ತು ಭವತ್ಪ್ರಸಾದಾತ್ ॥

ನಿನ್ನನ್ನು ವಂದಿಸುವಾಗ ಜನ್ಮ ಜನ್ಮಾಂತರಗಳಲ್ಲಿಯೂ ನಿನ್ನ ಚರಣಾರವಿಂದಗಳಲ್ಲಿ ನನಗೆ ಮನವು ಸ್ಥಿರವಾಗಿ ನಿಲ್ಲಲಿ ಎಂದಿಷ್ಟನ್ನು ಮಾತ್ರ ಬೇಡುತ್ತೇನೆ ಎನ್ನುತ್ತಾರೆ. ಅಲ್ಲದೆ ಅವರಿಗೆ ಯಾವುದೇ ವಿಧವಾದ ಲೌಕಿಕ ಆಸೆ ಆಕಾಂಕ್ಷೆಗಳಾಗಲೀ, ಪ್ರಾರ್ಥನೆಯಲ್ಲಿ ಸ್ವಾರ್ಥ ಲೋಭಾದಿಗಳಾಗಲೀ ಇಲ್ಲ. ಆದ್ದರಿಂದಲೇ–

## ಭಾರ್ಗವಿಶ್ರೀ

ನಾಹಂ ವಂದೇ ತವಚರಣಯೋಃ
ದ್ವಂದ್ವ ಮದ್ವಂದ್ವಹೇತೋಃ ।
ಕುಂಭೀಪಾಕಂ ಗುರು ಮಪಿ
ಹರೇ ನಾರಕಂ ನಾಪನೇತುಂ ॥

ರಮ್ಯಾ ರಾಮಾ ಮೃದು ತನುಲತಾ
ನಂದನೇನಾಪಿ ರಂತುಂ ।
ಭಾವೇ ಭಾವೇ ಹೃದಯ ಭವನೇ
ಭಾವಯೇಯಂ ಭವಂತಮ್ ॥

ಎಂದರೆ ದೈವದ ಚರಣಯುಗಳವನ್ನು ಸುಖ ದುಃಖಾದಿ ದ್ವಂದ್ವಗಳಿಗಾಗಲೀ, ನರಕಯಾತನೆಯನ್ನು ನಿವಾರಿಸಲಿಕ್ಕಾಗಿಯಾಗಲೀ, ಇಂದ್ರ ವೈಭೋಗವನ್ನು ಅನುಭವಿಸಲಿಕ್ಕಾಗಿ ಯಾಗಲೀ ನಮಸ್ಕರಿಸುವುದಿಲ್ಲವಂತೆ. ಕೇವಲ ಪ್ರತಿ ನೆನಪಿನಲ್ಲಿಯೂ ತಮ್ಮ ಹೃದಯವೆಂಬ ಭವನದಲ್ಲಿ ದೈವವನ್ನು ಅನುಭವಿಸಲು ಮಾತ್ರ ನಮಸ್ಕರಿಸುತ್ತಾರಂತೆ. ಆ ಭಕ್ತಿಯ ಗಳಿಕೆ ಉಳಿಕೆಯ ಬಗ್ಗೆ ಕೂಡ ಇವರದು ದೃಢ ನಿಶ್ಚಯ. ಅದನ್ನು–

ನಾಸ್ಥಾ ಧರ್ಮೇ ನ ವಸು ನಿಚಯೇ
ನೈವ ಕಾಮೋಪಭೋಗೇ ।
ಯದ್ಯದ್ಭವ್ಯಂ ಭವತು ಭಗವನ್
ಪೂರ್ವ ಕರ್ಮಾನುರೂಪಂ ॥

ಏತತ್ಪ್ರಾರ್ಥ್ಯಂ ಮಮ ಬಹುಮತಂ
ಜನ್ಮ ಜನ್ಮಾಂತರೇಽಪಿ ।
ತ್ವತ್ಪಾದಾಂಭೋರುಹ ಯುಗ
ಗತಾ ನಿಶ್ಚಲಾ ಭಕ್ತಿರಸ್ತು ॥

ನನಗೆ ನಿನ್ನ ಪುಣ್ಯ ಕರ್ಮಾಚರಣೆಯಲ್ಲಾಗಲೀ, ಭೋಗದಲ್ಲಾಗಲೀ ಆಸಕ್ತಿಯಿಲ್ಲ. ಈ ಜನ್ಮದ ನನ್ನ ಬದುಕು ನನ್ನ ಪೂರ್ವಜನ್ಮ ಕರ್ಮಾನುಸಾರವಾಗಿಯೇ ಇರಲಿ. ಆದರೆ ಈ ಜನ್ಮದಲ್ಲಿಯೂ, ಮುಂದಿನ ಜನ್ಮಗಳಲ್ಲಿಯೂ ನಿನ್ನಲ್ಲಿ ಸ್ಥಿರಭಕ್ತಿ ಇರಲೆಂಬಷ್ಟು ಮಾತ್ರ ನಿನ್ನನ್ನು ಪ್ರಾರ್ಥಿಸುತ್ತೇನೆ' ಎಂದು ಮೊರೆಯಿಡುತ್ತಾರೆ. ಅವರ ಮನಸ್ಸು ಎಷ್ಟು ದೃಢವಾಗಿದೆ ಎಂದರೆ–

ದಿವಿ ವಾ ಭುವಿ ವಾ ಮಮಾಸ್ತು ವಾಸೋ
ನರಕೇ ವಾ ನರಕಾಂತಕ ಪ್ರಕಾಮಂ ।
ಅವಧೀರಿತ ಶಾರದಾರವಿಂದೌ
ಚರಣೌ ತೇ ಮರಣೇಽಪಿ ಚಿಂತಯಾಮಿ ॥

ನಾನು ನರಕದಲ್ಲಿಯಾಗಲೀ ಅಥವಾ ಸ್ವರ್ಗದಲ್ಲಿಯಾಗಲೀ ಇರಲಿ, ಭೂಮಿಯಲ್ಲಾಗಲೀ ಇರಲಿ ನನ್ನ ಏಕೈಕ ಧ್ಯೇಯವೆಂದರೆ ನನ್ನ ಮರಣ ಕಾಲದಲ್ಲಿಯೂ ನಿನ್ನ ಚರಣಯುಗಳವನ್ನು ಸ್ಮರಿಸುವುದು ಮಾತ್ರ. ಅಂತಹ ಏಕಾಗ್ರತೆಯನ್ನೇನೊ ಸಾಧಿಸಿದ್ದಾಗಿದೆ. ಆದರೂ ಅಷ್ಟಕ್ಕೇ ನಿಲ್ಲದೆ ದೈವದಲ್ಲಿ ತಾದಾತ್ಮ್ಯ ಹೊಂದಲು ಹೀಗೆ ಹೇಳುತ್ತಾರೆ–

ಕೃಷ್ಣ ತ್ವದೀಯ ಪದ ಪಂಕಜ
ಪಂಜರಾಂತಃ ಅದ್ಯೈವ ಮೇ
ವಿಶತು ಮಾನಸ ರಾಜಹಂಸಃ
ಪ್ರಾಣ ಪ್ರಯಾಣ ಸಮಯೇ ಕಫವಾತಪಿತ್ತೈಃ
ಕಂಠಾವರೋಧನ ವಿಧೌ ಸ್ಮರಣಂ ಕುತಸ್ತೇ ॥

ಮಾನವ ಸಹಜವಾದ ಅರಿಷಡ್ವರ್ಗಾದಿಗಳು ನನ್ನನ್ನು ಬಾಧಿಸುತ್ತಾ ಇನ್ನೂ ವಯಸ್ಸಾದಂತೆ ಅಜ್ಞಾನವೂ ಆವರಿಸಿಕೊಂಡು ನಿನ್ನನ್ನು ಸ್ಮರಿಸಲು ಸಾಧ್ಯವಾಗದೇ ಹೋಗಬಹುದು. ಆದ್ದರಿಂದ ನನ್ನ ಶರೀರ ಹಾಗೂ ಅಂತರಿಂದ್ರಿಯಗಳು ಸರಿಯಾಗಿರುವ ಸಮಯದಲ್ಲಿಯೇ ನನ್ನ ಮನವೆಂಬ ರಾಜಹಂಸವು ನಿನ್ನ ಪಾದಾರವಿಂದಗಳೆಂಬ

ಪಂಜರವನ್ನು ಪ್ರವೇಶಿಸಲಿ ಎಂಬ ಮಹದಭಿಲಾಷೆಯನ್ನು ವ್ಯಕ್ತ ಪಡಿಸುತ್ತಾರೆ. ಇಂತಹ ಪರಿಣಾಮವನ್ನು ಹೊಂದಲಿಕ್ಕಾಗಿ–

ಚಿಂತಯಾಮಿ ಹರಿಮೇವ ಸಂತತಂ
ಮಂದ ಮಂದ ಹಸಿತಾನನಾಂಬುಜಮ್ ।
ನಂದಗೋಪತನಯಮ್ ಪರಾತ್ಪರಂ
ನಾರದಾದಿ ಮುನಿಬೃಂದ ವಂದಿತಮ್ ॥

ಎಂಬ ದೃಢಹಾದಿಯನ್ನೇ ಹಿಡಿದಿದ್ದಾರೆ. ಆದರೆ ಈ ಹಾದಿಯಲ್ಲಿ ಪಯಣಿಸಲು ಕೆಲವೊಂದು ಸಿದ್ಧತೆಗಳು ಬೇಕಾಗುತ್ತವೆ. ಆದರಲ್ಲಿ ಮೊದಲನೆಯದು ಮನೋವ್ಯಥೆಯನ್ನು ದೂರ ಮಾಡಬೇಕು. ಅದಕ್ಕಿರುವ ಪರಿಹಾರ ಮಾರ್ಗವೆಂದರೆ–

ಕರಚರಣ ಸರೋಜೇ ಕಾಂತಿಮ
ನ್ನೇತ್ರ ಮೀನೇ ಶ್ರಮಮುಷಿ ಭುಜವೀಚಿ
ವ್ಯಾಕುಲೇಽ ಗಾಧಮಾರ್ಗೇ
ಹರಿಸರಸಿ ವಿಗಾಹ್ಯಾ ಪೀಯ
ತೇಜೋ ಜಲೌಘಂ
ಭವಮರು ಪರಿಖಿನ್ನಃ
ಖೇದಮದ್ಯ ತ್ಯಜಾಮಿ ॥

ಮರುಭೂಮಿಯಂತಿರುವ ಈ ಸಂಸಾರದಲ್ಲಿ ಸಿಲುಕಿ ದುಃಖಗಳನ್ನನುಭವಿಸುವುದಕ್ಕಿಂತಲೂ ಕೈಗಳು, ಪಾದಗಳು ಎಂಬ ಕಮಲ, ನೇತ್ರವೆಂಬ ಮೀನು, ಬಾಹುವೆಂಬ ಅಲೆಗಳ, ಹರಿ ಎಂಬ ಸರಸ್ಸಿನಲ್ಲಿ ಮುಳುಗಿ ಆವನ ತೇಜಸ್ಸೆಂಬ ಉದಕವನ್ನು ಪಾನಮಾಡಿ, ಮನೋವ್ಯಥೆಯೆಂಬ ದಾಹವನ್ನು ಈಗಲೇ ತೀರಿಸಿಕೊಂಡು ತೃಪ್ತನಾಗುವೆನು, ಎನ್ನುವರು. ಹರಿಯನ್ನೇ ಏಕೆ ನೆನೆಯಬೇಕು ಎಂಬ ಸಂಶಯ ಇಲ್ಲಿ ಬಂದರೂ ಬರಬಹುದು. ಅದಕ್ಕೂ ಇವರಲ್ಲಿ ಸೂಕ್ತ ಉತ್ತರವಿದೆ.

ಸರಸಿಜನಯನೇ ಸಶಂಖಚಕ್ರೇ
ಮುರಭಿದಿ ಮಾ ವಿರಮಸ್ವ ಚಿತ್ತ ರಂತುಂ ।
ಸುಖ ತರಮಪರಂ ನ ಜಾತು ಜಾನೇ
ಹರಿಚರಣ ಸ್ಮರಣಾಮೃತೇನ ತುಲ್ಯಮ್ ॥

ಶಂಖಚಕ್ರಾ ಯುಧಗಳನ್ನೂ ಹೊಂದಿ ಕಮಲ ನಯನನೂ ಆಗಿರುವ ಶ್ರೀ ಕೃಷ್ಣನನ್ನು ಧ್ಯಾನಿಸಿ ಸಂತೋಷಿಸ ಬೇಕು. ಏಕೆಂದರೆ ಆ ದೈವ ಧ್ಯಾನಾಮೃತವು ಅಸಮಾನವಾದದ್ದು ಎಂದು ಗಂಟಾಘೋಷವಾಗಿ ಹೇಳುತ್ತಾರೆ. ಆದರೆ ಮನಸ್ಸು ಚಂಚಲವಾದದ್ದು, ಹಾಗೂ ಸಂಶಯ ಪೀಡಿತವಾದದ್ದು. ನಾನಾ ಚಿಂತೆಗಳಿಂದ ಬಾಧಿತವಾದ ಮನಸ್ಸು ಹರಿಸ್ಮರಣೆಯ ಕಡೆಗೆ ಸುಲಭವಾಗಿ ತಿರುಗದು. ಅದಕ್ಕಾಗಿ ಈ ಭಕ್ತಾಗ್ರೇಸರರು–

ಮಾ ಭೀರ್ಮಂದ ಮನೋ ವಿಚಿಂತ್ಯ
ಬಹುಧಾಯಾಮೀಶ್ಚಿರಂ ಯಾತನಾಃ ।
ನಾಮೀ ನಃ ಪ್ರಭವಂತಿ ಪಾಪರಿಪವಃ
ಸ್ವಾಮೀ ನನು ಶ್ರೀಧರಃ ॥

ಆಲಸ್ಯಂ ವ್ಯಪನೀಯ ಭಕ್ತಿ ಸುಲಭಂ
ಧ್ಯಾಯಸ್ವ ನಾರಾಯಣಂ ।
ಲೋಕಸ್ಯ ವ್ಯಸನಾಪನೋದನ
ಕರೋ ದಾಸಸ್ಯ ಕಿಂ ನ ಕ್ಷಮಃ ॥

ಎಲೈ ಮೂಢ ಮನಸ್ಸೇ! ಭವರೋಗಗಳ ಚಿಂತೆಯಲ್ಲೇ ತೊಡಗಿ ಭಯಪಡುತ್ತಾ ಕಾಲ ಕಳೆಯುವುದಕ್ಕಿಂತಲೂ ಭಕ್ತಿ ಧ್ಯಾನಾದಿಗಳಿಂದ ಸುಲಭನಾಗಿರುವ ಶ್ರೀ ಹರಿಯನ್ನು ನಾನಾವಿಧವಾಗಿ ಸೇವಿಸು. ಆತನಲ್ಲಿ ದಾಸ್ಯಭಾವವನ್ನು ತೋರು. ಅವನು ನಿನ್ನನ್ನು ರಕ್ಷಿಸುವನು ಎಂದು ಎಚ್ಚರಿಕೆ ನೀಡಿ ಸಮಾಧಾನವನ್ನೂ ಹೇಳುತ್ತಾರೆ. ಆದರೆ ಈ ಭವಸಾಗರವನ್ನು ದಾಟುವುದು ಅಷ್ಟು ಸುಲಭವಲ್ಲ. ಏಕೆಂದರೆ ಮಾನವರು–

ಭವಜಲಧಿಗತಾನಾಂ
ದ್ವಂದ್ವ ವಾತಾ ಹತಾನಾಂ
ಸುತ ದುಹಿತೃ ಕಳತ್ರ
ತ್ರಾಣ ಭಾರಾರ್ದಿತಾನಾಂ
ವಿಷಮ ವಿಷಯ ತೋಯೇ
ಮಜ್ಜತಾ ಮಪ್ಲವಾನಾಂ

ಈ ಭವಸಾಗರದಲ್ಲಿನ ಸುಖ ದುಃಖಾದಿ ದ್ವಂದ್ವಗಳಲ್ಲಿ ಸಿಲುಕಿ, ಬಂಧು ಬಾಂಧವರೆಂಬ ಬಂಧನದಲ್ಲಿ ಬಂಧಿಸಲ್ಪಟ್ಟಿರುತ್ತಾರೆ. ಆಗ

"ಭವತು ಶರಣಮೇಕೋ
ವಿಷ್ಣು ಪೋತೋ ನರಾಣಾಮ್"

ವಿಷ್ಣುವೆಂಬ ಹಡಗು ಅವರಿಗೆ ಆಧಾರವಾಗಿ ರಕ್ಷಿಸಲಿ ಎಂದು ಆಶಿಸುತ್ತಾರೆ. ಆದ್ದರಿಂದ ಅವರಿಗೆ ಹರಿಯಲ್ಲದೆ ಅನ್ಯಥಾ ಶರಣಂ ನಾಸ್ತಿ. ಇನ್ನೂ ಮುಂದುವರಿದ ಮಹಾತ್ಮರು ಆ ದೈವವನ್ನು ಕುರಿತು "ಪಾದಾಂಭೋಜೇ ವರದ ಭವತೋ ಭಕ್ತಿ

*Statement about ownership and other particulars about*

## SAPTHAGIRI (MONTHLY)

### FORM IV

(*See Rule* 8)

| | | | |
|---|---|---|---|
| 1 | Place of publication | ... | TIRUPATI. |
| 2 | Periodicity of its publication | ... | Monthly |
| 3 | Honorary Editor | ... | Sri S. Lakshminarayana, I.A.S. Executive Officer, T.T.D. |
| 4 | Printer's Name<br>Whether citizen of India<br>Address | ...<br>...<br>... | Sri M. Vijayakumar Reddy, L.P.T.,<br>Yes<br>Manager, T.T.D. Printing Press, Tirupati. |
| 5 | Editor & Publisher's Name<br>Whether citizen of India<br>Address | ...<br>... | K. Subba Rao, M.A.,<br>Yes<br>Editor, Sapthagiri, T.T.D. Journal, Tirupati. |
| 6 | Names and addresses of individuals who own the Newspaper and partners or shareholders holding more than one per cent of the total capital. | ...<br>... | Board of Trustees represented by the Executive Officer on behalf of T. T. D., Tirupati. |

*I, K. Subba Rao, hereby declare that the particulars given above are true to the best of my knowledge and belief.*

TIRUPATI,
*Date*: 28-2-1985.

(*Sd.*) **K. SUBBA RAO,**
*Signature of the Publisher.*

ನಾವಂ ಪ್ರಯಚ್ಛ" ಎಂದು ಬೇಡುತ್ತಾರೆ. ಅವರಿಗೆ ಬೇಕಿರುವುದು ದೈವ ಭಕ್ತಿಯೊಂದೇ. ಆ ಭಕ್ತಿಯಾದರೋ ಬಹಳ ಪರಿಶುದ್ಧವಾದದ್ದಾಗಿರಬೇಕಷ್ಟೇ ಅಲ್ಲದೆ ಎಲ್ಲ ಸಂಸರ್ಗಗಳಿಂದಲೂ ದೂರವಿರಬೇಕು, ಎಂಬುದು ಇವರ ನಿಯಮ. ಆದ್ದರಿಂದ ನಿನ್ನಿಂದ ಎಲ್ಲ ವಿಧದಿಂದಲೂ ದೂರವಿರುವವರನ್ನು ನಾನು ದೂರಮಾಡುವುದಷ್ಟೇ ಅಲ್ಲದೆ ನಿನ್ನಿಂದ ವಿಮುಖನಾಗೆನು, ಎಂದು ಸಂಕಲ್ಪ ಮಾಡಿದ್ದಾರೆ. ಅದಕ್ಕಾಗಿ—

ಜಿಹ್ವೇ ಕೀರ್ತಯ ಕೇಶವಂ
ಮುರರಿಪುಂ ಚೇತೋ ಭಜ ।
ಶ್ರೀಧರಂ ಪಾಣಿದ್ವಂದ್ವ ಸಮರ್ಚಯ
ಅಚ್ಯುತ ಕಥಾ ಶ್ರೋತ್ರದ್ವಯ ತ್ವಂ ಶೃಣು ॥
ಕೃಷ್ಣಂ ಲೋಕಯ ಲೋಚನದ್ವಯ
ಹರೇರ್ಗಚ್ಛಾಂಘ್ರಿಯುಗ್ಮಾಲಯಂ ।
ಜಿಘ್ರ ಘ್ರಾಣ ಮುಕುನ್ದ ಪಾದತುಲಸೀಂ
ಮೂರ್ಧನ್ನಮಾಧೋಕ್ಷಜಮ್ ॥

ನನ್ನ ತನುಮನಗಳೆಲ್ಲವೂ ಆ ಶ್ರೀಹರಿಯ ಸೇವೆಗಾಗಿ ಮಾತ್ರವೇ ಹೊರತು ಬೇರೆಯದಕ್ಕಾಗಿ ಅವು ವ್ಯಯವಾಗವು ಎಂಬ ಔನ್ನತ್ಯವನ್ನು ಮೆರೆದಿದ್ದಾರೆ. ಮಾನವರು ಸಾಸಿವೆಯಷ್ಟು ಸುಖಕ್ಕಾಗಿ ಸಾಗರದಷ್ಟು ಕಷ್ಟ ಪಡುತ್ತಾರೆ. ಆದರೆ ನಿಜವಾದ ಪರಿಹಾರ ಎಲ್ಲಿದೆ ಎಂಬುದು ಅವರಿಗೆ ತಿಳಿಯದು. ಅಂತಹ ಅಜ್ಞಾನಿಗಳಿಗೆ ಜ್ಞಾನ ದೀವಿಗೆ ಹಿಡಿಯುವಂತಹವು ಕುಲಶೇಖರರ ಮಾತುಗಳು.

ಈ ಭಗವಾನರ ದೃಷ್ಟಿಯಲ್ಲಿ ಶ್ರೀಕೃಷ್ಣ ಮಹಿಮೆಯು ಬಹಳ ಮಹತ್ವವಾದದ್ದು. ಆದ್ದರಿಂದ ಭಕ್ತನಾದವನು 'ತನ್ನ ಕರ, ಶಿರ, ಅವಯವ, ಕಂಠ, ನೇತ್ರಾದಿಗಳು ಸರ್ವಕಾಲದಲ್ಲಿಯೂ ಆ ಭಗವಂತನ ಧ್ಯಾನ ಸ್ಮರಣೆಯಿಂದ ಕೂಡಿದುದಾಗಲಿ ಎಂದು ಆ ಭಗವತ್ ಶಕ್ತಿಯನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿಕೊಳ್ಳಬೇಕು, ಒಲಿಸಿಕೊಳ್ಳಬೇಕು. ಅಷ್ಟೇ ಅಲ್ಲದೆ "ಮಾಂ, ಹೇ ಗೋಪೀನಾಥ! ಪಾಲಯ, ಪರಂ ಜಾನಾಮಿ ನ ತ್ವಾಂ ವಿನಾ'' – ನಿನ್ನ ವಿನಹ ನಾನು ಮತ್ತಾರನ್ನೂ ಅರಿಯೆನು, ಆದ್ದರಿಂದ ನನ್ನನ್ನು ಪಾಲಿಸು ಗೋಪಿನಾಥ – ಎಂದು ನಿರ್ಬಂಧ ಹಾಕಿದರೂ ಕೂಡ ತಪ್ಪಾಗಲಾರದು.

ಆದರೆ ನಾವು ಮಾನಸಿಕವಾಗಿ ಸಿದ್ಧಗೊಳ್ಳದ ಹೊರತು ನಾವು ಮಾಡುವ ಯಾವ ಪೂಜೆಯೂ ವ್ಯರ್ಥ. ಆದ್ದರಿಂದ ಸ್ಮರಣ ಪೂರ್ವಕವಾಗಿ ಕರ್ಮಾಸಕ್ತರಾಗಬೇಕು. ಆದರೆ ಆ ಭಗವದ್ಧ್ಯಾನವಿಲ್ಲದಿದ್ದರೆ ಏನಾಗುತ್ತದೆಂಬುದನ್ನು–

ಶ್ರೀಮನ್ನಾಮ ಪ್ರೋಚ್ಯ ನಾರಾಯಣಾಖ್ಯಂ
ಕೇನಾಪ್ರಾಪ್ತಂ ವಾಂಛಿತಂ ಪಾಪಿನಾಪಿ ।
ಹಾ! ನಃ ಪೂರ್ವಂ ವಾಕ್ಪ್ರವೃತ್ತಾ ನ ತಸ್ಮಿನ್
ತೇನ ಪ್ರಾಪ್ತಂ ಗರ್ಭವಾಸಾದಿ ದುಃಖಮ್ ॥

ಅಂದರೆ ಆ ದೈವವನ್ನು ಸ್ಮರಿಸದಿದ್ದುದರಿಂದಲೇ ನಮಗೆ ಪುನಃ ಪುನಃ ಜನ್ಮ ಲಭಿಸುವಂತಾಯಿತು ಎಂದು ಬಹಳ ಅರ್ಥವತ್ತಾಗಿ ತಿಳಿಸಿದ್ದಾರೆ. ಹಾಗೆ ಅರ್ಥ ಮಾಡಿಕೊಂಡು ನಡೆದುಕೊಂಡರೂ ಕೆಲವೊಮ್ಮೆ ಆ ದೈವವು ಒಲಿಯದೇ ಇರಬಹುದು. ನಮಗೆ ತನ್ನಲ್ಲಿ ಆಶ್ರಯ ನೀಡದೆಯೇ ಹೋಗಬಹುದು. ಅಂಥ ವೇಳೆಯಲ್ಲಿ ನಾವು ಏನು ಮಾಡಬೇಕೆಂಬುದನ್ನು ಹೀಗೆ ಹೇಳುವರು–

ಮಜ್ಜನ್ಮನಃ ಫಲಮಿದಂ ಮಧುಕೈಟಭಾರೇ
ಮತ್ಪ್ರಾರ್ಥನೀಯ ಮದನುಗ್ರಹ ಏಷ ಏವ ।
ತ್ವದ್ಭೃತ್ಯಭೃತ್ಯ ಪರಿಚಾರಕ ಭೃತ್ಯ ಭೃತ್ಯ
ಭೃತ್ಯಸ್ಯಭೃತ್ಯ ಇತಿ ಮಾಂ ಸ್ಮರ
ಲೋಕನಾಥ ॥

ಅಂದರೆ ನನ್ನ ಏಳಿಗೆಯನ್ನು ನೀನು ಬಯಸುವವನಾದರೆ ನಿನ್ನ ದಾಸಾನುದಾಸರಲ್ಲಿ ನನ್ನನ್ನು ದಾಸನೆಂದು ಪರಿಗಣಿಸಿ ಅನುಗ್ರಹಿಸು ಎಂದು ಬೇಡಬೇಕಾಗುತ್ತದೆ ಎಂದು ತಿಳಿಸಿದ್ದಾರೆ. ಈ ಶ್ಲೋಕದಲ್ಲಿ ಭಕ್ತನೊಬ್ಬನ ಭಕ್ತಿಯ ಪಕ್ವತೆ, ನಿಷ್ಠುರತೆ, ಹಾಗೂ ಅಪೇಕ್ಷೆಗಳು ಎದ್ದು ಕಾಣುತ್ತವೆ. ಅಲ್ಲಿಗೂ ದೈವ ಕೃಪೆಯು ದೊರೆಯದಿದ್ದಾಗ ಶಾಶ್ವತನಾದ ನಿನ್ನನ್ನು ಬಿಟ್ಟು ಅಜ್ಞರೂ, ನೀಚರೂ, ದ್ರೋಹಿಗಳೂ ಆದವರನ್ನು ನಂಬುತ್ತಾ ಅವರನ್ನು ಸೇವೆಗೈಯುತ್ತಾ ಕಾಲಹರಣ ಮಾಡುತ್ತಿದ್ದೇನೆ. ಇದೆಂಥ ಆಶ್ಚರ್ಯ, ಎಂಥ ಅಜ್ಞಾನ ನನ್ನನ್ನು ಮುಸುಕಿದೆ ಎಂದು ಸ್ವ–ವಿಮರ್ಶೆ ಮಾಡಿಕೊಳ್ಳುತ್ತಾರೆ.

ಆದರೆ ಕೇವಲ ಸ್ವ–ವಿಮರ್ಶೆಯೊಂದೇ ಉಪಯುಕ್ತವಾಗಲಾರದು. ಇಂದ್ರಿಯ ನಿಗ್ರಹವೂ ಇದರೊಂದಿಗೆ ಅತ್ಯಗತ್ಯವೆಂಬುದನ್ನು ಇವರು ಬಲ್ಲರು. ಅದಕ್ಕಾಗಿ ಇಂದ್ರಿಯಗಳ ಒಡೆಯನಾದ ಮನ್ಮಥನನ್ನು ಕುರಿತು– "ನೀನು ಈಶ್ವರನಿಂದ ಕೇವಲ ನಾಮ ಮಾತ್ರನಾಗಿಯಾದರೂ ಉಳಿದಿದ್ದೀಯೆ. ಅಷ್ಟಕ್ಕೆ ತೃಪ್ತನಾಗದೆ ನನ್ನ ಮನಸ್ಸಿನಲ್ಲಿ ನಿಲ್ಲುವ ಯತ್ನ ಮಾಡಿದ್ದೇ ಆದರೆ ಮಹಾವಿಷ್ಣುವಿನ, ಪರಾಕ್ರಮಯುತವಾದ ಚಕ್ರಾಯುಧವು ನಿನ್ನನ್ನು ನಿರ್ನಾಮ ಮಾಡುತ್ತದೆ" ಎಂಬ ಎಚ್ಚರಿಕೆಯನ್ನೇ ನೀಡಿದ್ದಾರೆ. ಇದರೊಂದಿಗೆ ನಾವು ಜಿಹ್ವಾಚಾಪಲ್ಯದಿಂದಲೂ ವಿಮುಕ್ತರಾಗಬೇಕಾದದ್ದು ಅತ್ಯವಶ್ಯಕ. ಅದಕ್ಕೆ ನಮ್ಮ ಮನಸ್ಸನ್ನು ದೃಢವಾಗಿಸಿಕೊಳ್ಳಬೇಕು. ಆದರೆ ಈ ಮಹಾನುಭಾವರ ದೃಷ್ಟಿಯಲ್ಲಿ ಅದು ಬಹಳ ಮಹತ್ತರ ಸಾಧನೆ. ಅದಕ್ಕಾಗಿ ಅವರು ಜಿಹ್ವೆಯನ್ನು ಕುರಿತು–

ತತ್ತ್ವಂ ಬ್ರುವಾಣಾನಿ ಪರಂ ಪರಸ್ಮಾತ್
ಮಧು ಕ್ಷರಂತೀವ ಸತಾಂ ಫಲಾನಿ ।
ಪ್ರಾವರ್ತಯ ಪ್ರಾಂಜಲಿರಸ್ಮಿ ಜಿಹ್ವೇ
ನಾಮಾನಿ ನಾರಾಯಣ ಗೋಚರಾಣಿ ॥

ಎಲೈ ನಾಲಿಗೆಯೇ ಸತ್ಫಲದಾಯಕನಾದ ಭಗವಂತನ ನಾಮ ಸಂಕೀರ್ತನೆಯನ್ನು ಮಾಡೆಂದು ಅಂಜಲೀಬದ್ಧನಾಗಿ ಬೇಡುತ್ತೇನೆ ಎಂಬ ದೈನ್ಯತೆಯನ್ನೇ ತೋರುವುದಲ್ಲದೆ;

ಇದಂ ಶರೀರಂ ಪರಿಣಾಮ ಪೇಶಲಂ
ಪತತ್ಯವಶ್ಯಂ ಶ್ಲಥ ಸಂಧಿಜರ್ಜರಂ ।
ಕಿಮೌಷಧೈಃ ಕ್ಲಿಶ್ಯಸಿ ಮೂಢ ದುರ್ಮತೇ
ನಿರಾಮಯಂ ಕೃಷ್ಣರಸಾಯನಂ ಪಿಬ ॥

ಎಲೈ ಮೂಢನೆ; ಈ ಶರೀರ ಅನಿತ್ಯವಾದದ್ದು. ಆದ್ದರಿಂದ ಶರೀರಾಭಿಮಾನ ತೊರೆದು ಅದರ ಸೇವೆ ಬಿಟ್ಟು, ಅಮೋಘವಾದ ಶ್ರೀಕೃಷ್ಣನೆಂಬ ರಸಾಯನವನ್ನು ಪಾನಮಾಡಿ, ಶಾಶ್ವತವಾದ ಸ್ಥಾನವನ್ನು ಪಡೆ ಎಂಬ ಆದೇಶವನ್ನೂ ನೀಡಿದ್ದಾರೆ. ಹೀಗೆ ಸಂಪೂರ್ಣ ಪೂರ್ವ ಸಿದ್ಧತೆ ಮಾಡಿಕೊಂಡು ಆ ದೈವವನ್ನು ಕುರಿತು–

ಶ್ರೀ ವಲ್ಲಭೇತಿ ವರದೇತಿ ದಯಾಪರೇತಿ
ಭಕ್ತ ಪ್ರಿಯೇತಿ ಭವಲುಂಠನ ಕೋವಿದೇತಿ ।
ನಾಥೇತಿ ನಾಗ ಶಯನೇತಿ ಜಗನ್ನಿವಾಸೇ
ತ್ಯಾಲಾಪನಂ ಪ್ರತಿಪದಂ
ಕುರು ಮೇ ಮುಕುಂದ ॥

ನಾನಾ ವಿಧವಾಗಿ ಹೊಗಳಲ್ಪಟ್ಟುತ್ತಿರುವ ನೀನು ಜಗದಾಧಾರನಾಗಿ ಇರುವ ನಿನ್ನ ದಿವ್ಯ ನಾಮಗಳನ್ನು ಪ್ರತಿ ಕ್ಷಣದಲ್ಲಿಯೂ ಉಚ್ಚರಿಸುವ ಭಾಗ್ಯವನ್ನು ನನಗೆ ಕೊಡುವವನಾಗು ಎಂದು ಪ್ರಾರ್ಥಿಸಿದ್ದಾರೆ. ಹೀಗೆ 'ನಾನನ್ಯಂ ಶರಣಂ ಮಮ"– ಎಂದು ಭಗವಂತನಲ್ಲಿ ದೈನ್ಯತೆ ತೋರುತ್ತಾ ತನ್ಮೂಲಕ ಜನ್ಮ ಸಾಫಲ್ಯ ಹೊಂದಿದಂತಹ ಮಹಾನುಭಾವರು ಕುಲಶೇಖರಾಳ್ವಾರರು.

(12ನೇ ಪುಟದಿಂದ)

ಗೋಕುಲದ ಗೋಪಿಯರ ವಿರಹವನ್ನು ಬಣ್ಣಿಸುವ ಕೀರ್ತನೆಗಳಲ್ಲಿ ವಿಪ್ರಲಂಭ ಶೃಂಗಾರದ ಹೊನಲು ಹರಿದಿದೆ. 'ತೋರೆ ಬೇಗನೆ ತ್ರೋಯಜನಯನೆ' ಎಂಬ ಕೀರ್ತನೆಯಲ್ಲಿ ದಶಾವತಾರಗಳನ್ನೆತ್ತಿದ ಶ್ರೀಕೃಷ್ಣನ ದರ್ಶನಕ್ಕೆ ಪರಿತಪಿಸಿದ ಗೋಪಿಕೆಯರ ಚಿತ್ರವಿದೆ. 'ಮಾರನ ತಾಪವ ಸೈರಿಸಲಾರನೆ, ನೀರೆ ನಿನಗೆ ಮುತ್ತಿನ್ಹಾರವ ಕೊಡುವೆನು' ಎಂದು ಮೊರೆಯಿಟ್ಟು ಹಾಡಿದ್ದಾರೆ. 'ತುಂಬಿತು ಬೆಳದಿಂಗಳು ಈ ವನದೊಳು' ಎಂಬ ಕೀರ್ತನೆಯಲ್ಲಿ ಕೃಷ್ಣನ ಸೋಂಕಿಲ್ಲದ ಗೋಕುಲದ ಸ್ಥಿತಿ ಏನಾಯಿತೆಂಬುದನ್ನು ಮನ ಕರಗುವಂತೆ ಚಿತ್ರಿಸಿರುವರು. ಅಡವಿಲಿ ಕೆರೆಕಟ್ಟೆ ಕುಡಿವೊರಿಲ್ಲದೆ ಬತ್ತಿ, ನಡೆವೊರಿಲ್ಲದೆ ದಾರಿ ಹಸಗೆಟ್ಟಿತು. ಕಾಡುಮಲ್ಲಿಗೆ ಹೂವ ಕುಯ್ದು ಮುಡಿವರಿಲ್ಲ! ನೋಡದೆ ಎನ್ನ ಜೀವ ಹಸಗೆಟ್ಟಿತಕ್ಕ!' "ಮಾಗಿ ಹೋಗಿ ವಸಂತವು ಬರುತ್ತಿದೆ ಕೋಗಿಲೆ ತುಂಬಿಲ್ಲಿ ಕೂಗುತಿದೆ! ಆಗಲೆ ಎಳಮಾವು ತಳಿರೇಳುತಿದೆ! ನಾಗಶಯನ ಕೃಷ್ಣ ಬಾರ ಕಾಣಕ್ಕ" ಎಂದು ಭಾವಪರವಶರಾಗಿ ನುಡಿದಿರುವರು. 'ಯಾಕೆ ಬೃಂದಾವನ ಯಾಕೆ ಗೋಕುಲ ನಮಗೆ! ಯಾಕೆ ಬಂದೆಯೊ ಉದ್ಧವಾ! ಯಾಕೆ ಸ್ನೇಹದ ಮಾತು ಲೋಕಮೋಹಕ ತಾನು ಆ ಕುಬ್ಜೆಯನು ಕೂಡಿದ' ಎಂಬ ಹಾಡಿದ ಇಂದೊಂದು ನುಡಿಯೂ ಗೋಕುಲದ ಅಬಲೆಯರ ವಿರಹವನ್ನೂ ಸಮರ್ಥವಾಗಿ ಬಣ್ಣಿಸುತ್ತಿವೆ.

'ದಾಸರೆಂದರೆ ಪುರಂದರ ದಾಸರಯ್ಯಾ' ಎಂಬುದೊಂದು ವ್ಯಾಸರಾಜರ ಅಪೂರ್ವ ಕೃತಿ. ಗುರುವನ್ನು ಕುರಿತು ಶಿಷ್ಯರು ಹಾಡುವುದು ಸಂಪ್ರದಾಯ; ಆದರೆ ಇಲ್ಲಿ ವ್ಯಾಸರಾಜರು ಶಿಷ್ಯರಾದ ಪುರಂದರರ ಪ್ರಶಂಸೆಯನ್ನು, ಹರಿದಾಸರ ಲಕ್ಷಣಗಳನ್ನು ನೇರ ನುಡಿಗಳಿಂದ ಹೇಳಿದ್ದಾರೆ. ಈ ಗೀತೆಯಲ್ಲಿ ಭಕ್ತಿ ಕೈಗೂಡದ, ಲಾಭಲೋಲುಪ ದೃಷ್ಟಿಯುಳ್ಳ ನಾಟಕದ ದಾಸರ ಚಿತ್ರವನ್ನೂ ನಿರ್ಭಯವಾಗಿ ವಿಮರ್ಶಿಸಿದ್ದಾರೆ. 'ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು! ದಾಸನೆಂದು ತುಲಸಿಮಾಲೆ ಧರಿಸಿ! ಬೇಸರಿಲ್ಲದೆ ಅವರ ಕಾಡಿ ಬೇಡಿ ಬಳಲಿಸುತ! ಕಾಸುಗಳಿಸುವ ಪುರುಷನವ ಹರಿದಾಸನೆ!" ಎಂದು ವ್ಯಾಸರಾಜರು ಪ್ರಶ್ನಿಸಿದ್ದಾರೆ. ಹೀಗೆ ವ್ಯಾಸರಾಜರ ಸಾಹಿತ್ಯವನ್ನು ಶೈಲಿಯ ದೃಷ್ಟಿಯಿಂದ ಪರಿಶೀಲಿಸಿದರೆ 'ರೀತಿರಾತ್ಮಾ ಕಾವ್ಯಸ್ಯ' ಎಂಬ ಆಲಂಕಾರಿಕರ ಮಾತಿನ ಅರ್ಥ ವಿದಿತವಾಗುತ್ತದೆ.

ನೇ ಪುಟದಿಂದ)

ತಿಯನ್ನು ರಚಿಸಿದವನು ಕುಮಾರ ವಾಲ್ಮೀಕಿ ಎಂಬ ಪ್ರಸಿದ್ಧ ನಾಮದಿಂದ ಕೂಡಿದ ತೊರವೆಯ ರಹರಿ ಎಂಬುವನು.

ನರಹರಿಯು ತೊರವೆಯೆಂಬ ಊರಿನವನು. ದು ಈಗಿನ ಬಿಜಾಪುರದ ಪಟ್ಟಣದಿಂದ ನಾಲ್ಕು ೈಲಿ ದೂರದಲ್ಲಿದೆ. ಆ ಊರಿನ ನರಸಿಂಹನ ಂಕಿತದಿಂದ ಅವನ ರಾಮಾಯಣಕ್ಕೆ 'ತೊರವೆಯ ಾಮಾಯಣ'ವೆಂಬ ಹೆಸರು ಬಂದಿದೆ. ಇವನು ನ್ನ ಗ್ರಂಥದಲ್ಲಿ ಕೃತಿರಚನಾಕಾಲವನ್ನು ತಿಳಿಯ ಡಿಸಿಲ್ಲ. ಗ್ರಂಥದ ಕೆಲವು ಆಂತರ್ಯ ಆಧಾರ ಳಿಂದ ಅವನ ಕಾಲವು ಕ್ರಿ. ಶ. ೧೫೮೦ ಇರ ಹುದೆಂದು ಪಂಡಿತರು ನಿಷ್ಕರ್ಷೆ ಮಾಡಿದ್ದಾರೆ. ವನ ರಾಮಾಯಣಕ್ಕೆ ಸಂಸ್ಕೃತದಲ್ಲಿರುವ ವಾಲ್ಮೀಕಿ ರಾಮಾಯಣ'ವೇ ಮೂಲ. ಆದರೂ ಾಲ್ಮೀಕಿ ರಾಮಾಯಣದಲ್ಲಿಲ್ಲದ ಪ್ರಾರಂಭದಲ್ಲಿ ಬರುವ ಶಿವ ಪಾರ್ವತಿಯರ ಸಂಭಾಷಣೆ, ಯುದ್ಧ ಕಾಂಡದಲ್ಲಿ ಬರುವ ಕಾಲನೇಮಿಯ ವೃತ್ತಾಂತ, ಾವಣನ ಮಾರಣ ಯಜ್ಞದ ವಿಷಯ – ಮೊದ ಲಾದುವುಗಳಿಂದ ಇದರ ಮೇಲೆ 'ಅಧ್ಯಾತ್ಮ ರಾಮಾಯಣ'ದ ಪ್ರಭಾವವೂ ಇರುವ ಹಾಗೆ ಕಾಣುತ್ತದೆ. ಕವಿಯು ಕಥಾನಾಯಕನಾದ ರಾಮನನ್ನು ಸಾಕ್ಷಾತ್ ದೈವವೆಂದೇ ಭಾವಿಸಿ ರಾಕ್ಷಸಾದಿಗಳ ಸಂಹಾರಕ್ಕಾಗಿಯೇ ಅವನು ಅವತರಿಸಿರುವನೆಂದು ತನ್ನ ಗ್ರಂಥದಲ್ಲಿ ಸ್ಪಷ್ಟ ಪಡಿಸಿದ್ದಾನೆ. ಇವನು ಆರು ಕಾಂಡದ ಕಥೆಯನ್ನು ಮಾತ್ರ ರಚಿಸಿದ್ದಾನೆ. ಕೊನೆಯ ಯುದ್ಧ ಕಾಂಡವು ಆಕಾರದಲ್ಲಿ ಮೊದಲ ಐದು ಕಾಂಡ ಗಳಿಗಿಂತ ವಿಸ್ತಾರವಾಗಿದೆ. ಒಟ್ಟಿನ ೫೨೦೦ ಪದ್ಯಗಳಲ್ಲಿ ಅರ್ಧ ಭಾಗಕ್ಕಿಂತ ಹೆಚ್ಚು ಯುದ್ಧ ಕಾಂಡದ ಭಾಗವಾಗಿದೆ. ಈ ರಾಮಾಯಣವು ಭಾಮಿನಿಷಟ್ಪದಿಯಲ್ಲಿ ರಚಿತವಾಗಿದೆ.

ವಾಲ್ಮೀಕಿಯನ್ನೇ ಪೂರ್ಣವಾಗಿ ಅನುಸರಿಸಿದ್ದರೂ ಇಲ್ಲಿ ಕೆಲವು ಮಾರ್ಪಾಟುಗಳು ಎದ್ದು ಕಾಣುತ್ತವೆ. ಇಲ್ಲಿಯ ಕಥೆ ಶಿವಪಾರ್ವತಿಯರ ಸಂಭಾಷಣೆಯಿಂದ ಪ್ರಾರಂಭವಾಗುತ್ತದೆ. ಶಿವನು ರಾಮನಾಮದ ಮಹಿಮೆಯನ್ನೂ, ವಾಲ್ಮೀಕಿಯ ಪೂರ್ವವೃತ್ತಾಂತವನ್ನೂ ತಿಳಿಸಿದ ಮೇಲೆ ನಾರದರ ಕಥಾಸರಣಿ ಪ್ರಾರಂಭವಾಗುತ್ತದೆ. ಋಷ್ಯಶೃಂಗರ ವಿಷಯ ಬಹು ವಿಸ್ತಾರವಾಗಿದೆ. ಅವರ ಮಹಿಮೆ, ಅವರನ್ನು ರೋಮಪಾದನ ನಗರಕ್ಕೆ ತಂದ ಅಬಲೆಯರ ಹಾವಭಾವ ವಿಲಾಸಗಳು ದೀರ್ಘವಾಗಿಯೇ ವರ್ಣಿತವಾಗಿವೆ. ಜಯ ವಿಜಯರಿಗೆ ಶಾಪ ಬಂದ ವೃತ್ತಾಂತ, ರಾವಣನ ಪೂರ್ವ ವೃತ್ತಾಂತ ಮುಂತಾದ ವಿಷಯಗಳ ವಿವರಣೆಯೂ ಇವೆ. ಮಂಥರೆಯ ಪ್ರಕರಣ ಬಹು ಸಂಗ್ರಹವಾಗಿದೆ. ಅವಳನ್ನು 'ಪೂರ್ವ ಮಾಯಾತರುಣಿ' ಎಂದು ಸೂಚಿಸಿದೆ. ಸೀತಾ ಲಕ್ಷ್ಮಣರೊಡನೆ ರಾಮನು ವನವಾಸಕ್ಕೆ ತೆರಳುವ ವಿಷಯ ಒಂದು ಪದ್ಯದಲ್ಲಿಯೇ ಮುಗಿದಿದೆ. ಲಕ್ಷ್ಮಣನ ಹೆಂಡತಿ ಊರ್ಮಿಳೆಯ ಪ್ರಸ್ತಾಪವೇ ಇಲ್ಲ. ವಾಲಿಯ ದೃಷ್ಟಿಯಲ್ಲಿ ರಾಮನು ಭೂಭಾರವನ್ನು ಇಳುಹುವುದಕ್ಕೆ ಬಂದ ವಿಷ್ಣುವಿನ ಅವತಾರವೇ. ರಾಮನ ಉಪದೇಶದಿಂದ ವಾಲಿಯ ಮನಸ್ಸಿನ ಕಲ್ಮಷವು ತೊಳೆದು ಹೋಗಿ ನಿಶ್ಶಂಕೆಯಿಂದ ಪರಲೋಕಕ್ಕೈದುವನು. ಇಲ್ಲಿ ರಾವಣನ ದುರಂತತೆ ತೀವ್ರವಾಗಿ ಪ್ರದರ್ಶಿಸಲ್ಪಟ್ಟಿದೆ. ಅವನ ಬಂಧುಗಳೆಲ್ಲ ಸತ್ತು ಪರಾಜಯವಾದನ್ನೂ ಅವನ ಪಶ್ಚಾತ್ತಾಪ ಹೆಚ್ಚುವುದು. ಅನುತಾಪದಿಂದ ಬೆಂದು 'ಮೆಚ್ಚಿಸುವೆನಾ ವನಜಪೀಠನ ನಿಗಮ ಜೂಟನ ಕೋಟಿ ಹೋಮದಲಿ' ಎಂದು ರಣಕ್ಕೆ ಹೊರಡುವನು. ಮುಂದೆ ಮಂಡೋದರಿಯು ರಾಮನು ಅವತಾರ ಪುರುಷನೆಂದೂ ಅವನನ್ನು ಮೊರೆಹೋಗುವುದೇ ಸೂಕ್ತವೆಂದೂ ಹೇಳಿದಾಗ ಆತನು;

ಬಲ್ಲೆಸೀ ರಘುನಾಥ ಲಕ್ಷ್ಮೀ
ವಲ್ಲಭನು ತಾನೆಂಬುದನು ನಾ
ಬಲ್ಲೆನವನಿಜೆ ಲಕ್ಷ್ಮಿಯೆಂಬುದನಾಹವಕ್ಕೆ ನೆರೆದ
ಭಿಲ್ಲರು ಮರ್ಕಟರು ಸುರರೆಂ
ದಲ್ಲವೇತಕೆ ಕೇಳು ರಣಮುಖ
ದಲ್ಲಿ ಕೊಡುವುದು ಸಂಕಲ್ಪ ತನಗೆಂದ

ಇದಕ್ಕೆ ಮೂಲವಾವುದೆಂಬುದು ಸರಿಯಾಗಿ ತಿಳಿಯದು. ಜೈನ ರಾಮಾಯಣಗಳ ಪ್ರಭಾವ ವಿದ್ದಿರಬಹುದೇನೋ ?

ಮತ್ತೆ ರಾವಣನು ಬಂಧುವರ್ಗಗಳನ್ನು ಕರೆದು 'ರಣದೊಳಗಳಿದೆನಾದರೆ ವರವಿಭೀಷಣ ದೇವನನು



'ಚಿನ್ನದ ಜಿಂಕೆಯ ಹಿಂದೆ'

ಪಚರಿಸಿಕೊಂಡಿಹುದು' ಎಂದು ನೇಮಿಸುತ್ತಾನೆ. ಇದಕ್ಕೆ ತಮಿಳಿನ 'ಕಂಬರಾಮಾಯಣ'ದ ಕುಂಭಕರ್ಣನ ಪಾತ್ರದ ಪ್ರಭಾವವಿದ್ದಿರಬೇಕು.

ಇವನ ಯುದ್ಧವರ್ಣನೆ ವಿಸ್ತಾರವಾಗಿದ್ದರೂ ವೈವಿಧ್ಯಪೂರ್ಣವಾಗಿಲ್ಲ, ಆದರೂ ವರ್ಣನೆಗಳು ಭಾವಪೂರ್ಣವಾಗಿವೆ. ಕರುಣರಸ ದ್ಯೋತಕವಾದ ಕೆಲವು ಸನ್ನಿವೇಶಗಳು ಆಕರ್ಷಕವಾಗಿವೆ. 'ತೊರವೆ ರಾಮಾಯಣ'ವು ವಾಚ್ಯಾರ್ಥಪ್ರಧಾನವಾದುದರಿಂದ ಇದು ಸಾಮಾನ್ಯ ಜನರಿಗೆ ಹಿತಕರವಾಗಿದೆ. ಇದು ಮಧ್ಯಮವರ್ಗದ ಕಾವ್ಯವಾದರೂ ಕುಮಾರವ್ಯಾಸ ಭಾರತದಂತೆ ಜನಗಳಿಗೆ ಪ್ರಿಯವಾಗಿ ವಾಲ್ಮೀಕಿ ರಾಮಾಯಣದ ಸಂಪ್ರದಾಯ ಗ್ರಂಥಗಳಲ್ಲಿ ಪ್ರಧಾನವಾಗಿದೆ.

ಸುಮಾರು ಕ್ರಿ. ಶ. ೧೭೫೦ ರಲ್ಲಿ ರಚಿತವಾದ 'ದಶಕಂಠ ರಾಮಾಯಣ'ವೆಂಬ ಗದ್ಯ ಕಾವ್ಯದಲ್ಲಿ ಅದು ತೆಲುಗಿನ ಭಾಸ್ಕರ ಕವಿಯ ರಾಮಾಯಣದ ಆಧಾರದ ಮೇಲೆ ರಚಿತವಾಗಿದೆಯೆಂದು ಸೂಚಿತವಾಗಿದೆ. ಅಂತರ್ಯ ಪರೀಕ್ಷೆಯಿಂದ ಆದರ ಪ್ರಭಾವವು ಇದರ ಮೇಲೆ ಆಗಿರುವಂತೆ ಕಾಣುವುದಿಲ್ಲ.

'ತೊರವೆಯ ರಾಮಾಯಣ'ವಾದ ಮೇಲೆ ೨೦ ನೆಯ ಶತಮಾನದವರೆಗೆ ಕನ್ನಡದಲ್ಲಿ ಇನ್ನೂ ಅನೇಕ ರಾಮಾಯಣಗಳು ರಚಿತವಾಗಿವೆ. ಅವು ಯಾವುವೂ ಯೋಗ್ಯತೆಯಲ್ಲಿ ಇದನ್ನು ಮೀರಿಸಲಾರವು. ಅವುಗಳಲ್ಲಿ ಕೆಲವು ಹೀಗಿವೆ.

ಉತ್ತರ ರಾಮಾಯಣ :– ನಾರಾಯಣ ಕವಿ ವಿರಚಿತ. ರಚನಾ ಕಾಲ ಸುಮಾರು ೧೭೦೦. ಭಾಮಿನಿಷಟ್ಪದಿಯಲ್ಲಿ ರಚಿತವಾಗಿದೆ. ೪೪ ಸಂಧಿಗಳೂ ೨೦೩೭ ಪದ್ಯಗಳೂ ಇದೆ.

ಅದ್ವೈತ ರಾಮಾಯಣ.– ನಿಜಗುಣಾರ್ಯ ಕೃತ. ಕಾಲ ೧೯೨೦. ವಚನ, ಅಸಮಗ್ರ, ರಾಮ ರಾವಣರ ಅದ್ವೈತ ವೈಭವವನ್ನು ವರ್ಣಿಸುತ್ತದೆ.

ಚಾಮರಾಜೋಕ್ತಿವಿಲಾಸ :–ಚಾಮಭೂಪಾಲ ಕೃತ, 'ವಾಲ್ಮೀಕಿ ರಾಮಾಯಣ'ದ ಪದ್ಯರೂಪ. ಕವಿಗೆ ಬಿರುದಂತೆಂಬರಗಂಡ, ಗಜವೇಂಟೆಗಾರ, ಚೌಷಷ್ಠಿ ಕಲಾಪ್ರವೀಣ–ಎಂಬ ಬಿರುದುಗಳಿದ್ದವು. ಪ್ರೌಢವಾದ ವಚನ ಶೈಲಿಯಲ್ಲಿದೆ. ಇದನ್ನು ವಿರೂಪಾಕ್ಷನೆಂಬುವನು ರಚಿಸಿ ಚಾಮರಾಜನಿಗೆ ಅಂಕಿತ ಮಾಡಿರಬಹುದು.

ಉತ್ತರ ರಾಮಾಯಣ :– ಕುಂದೂರು ಲಕ್ಕಪ್ಪ ರಚಿತ, ಶುಕರೂಪನು ಷಟ್ಕಾಂಡಗಳನ್ನು ರಚಿಸಲು ತಾನು ಉತ್ತರ ರಾಮಾಯಣವನ್ನು ರಚಿಸಿರುವಂತೆ ಹೇಳುತ್ತಾನೆ. ಇದರ ಕಾಲ ೧೭೧೨.

ಮೂಲಕ ರಾಮಾಯಣ :– ಕವಿಯಾರೆಂಬುದು ತಿಳಿಯದು. ಭಾಮಿನೀ ಷಟ್ಪದಿಯಲ್ಲಿದೆ ೭ ಸಂಧಿಗಳೂ ೩೭೯ ಪದ್ಯಗಳೂ ಇದೆ. ಇದರಲ್ಲಿ ಮೂಲಕಾಸುರನು ಲಂಕಾಪುರಿಗೆ ಮುತ್ತಿಗೆ ಹಾಕಿ ವಿಭೀಷಣನನ್ನು ಸೋಲಿಸಿ ಅಯೋಧ್ಯೆಗೆ ಬಂದು ರಾಮಲಕ್ಷ್ಮಣಭರತಶತ್ರುಘ್ನರನ್ನು ಸೋಲಿಸಿ ಕೊನೆಗೆ ಕುಶನಿಂದ ಸಂಹೃತನಾದ ಕಥೆ ಹೇಳಿದೆ. ಕಾಲ ೧೭೦೦ ಇದ್ದಿರಬಹುದು, ಸಾಮಾನ್ಯ ವರ್ಗದ ಕವಿತೆ.

ಉತ್ತರರಾಮಾಯಣ :– ತಿರುಮಲೆ ವೈದ್ಯ ಕೃತ, ಕವಿಬ್ರಾಹ್ಮಣ, ಮಧ್ಯಮವರ್ಗದ ಕವಿ. ೨೦ ಸಂಧಿಗಳೂ ೧೦೧೦ ಪದ್ಯಗಳೂ ಇವೆ. ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ. ಕುಮಾರ ವಾಲ್ಮೀಕಿಯು ರಚಿಸದೇ ಬಿಟ್ಟ ಉತ್ತರ ಕಾಂಡವನ್ನು ತಾನು ಕನ್ನಡಿಸಿದಂತೆ ಹೇಳಿಕೊಂಡಿದ್ದಾನೆ.

ಮಾರ್ಕಂಡೇಯ ಪುರಾಣ :– ತಿಮ್ಮರಸ ಕೃತ. ಕಾಲ ೧೭೫೦. ಯದುಗಿರೀಶ ನಾರಾಯಣನ ಅಂಕಿತ, ವಾರ್ಧಕ ಷಟ್ಪದಿಯಲ್ಲಿದೆ. ಸಂಧಿಗಳು ೩೦. ಪದ್ಯಸಂಖ್ಯೆ ೧೫೦೦. ಇದು ಮಾರ್ಕಂಡೇಯನು ಯುಧಿಷ್ಠಿರನಿಗೆ ಹೇಳಿದ ರಾಮಾಯಣದ ಕಥೆ.

ಶಂಕರ ರಾಮಾಯಣ :– ಇದರ ಕವಿ ತಿಮ್ಮರಸನಿರಬಹುದು. ಭಾಮಿನಿಷಟ್ಪದಿಯಲ್ಲಿದೆ. ಈಶ್ವರನು ಗಿರಿಜೆಗೆ ರಘುವಂಶದ ಪರಂಪರೆಯನ್ನು ತಿಳಿಸುತ್ತಾನೆ. ಈಶ್ವರನ ಒಡ್ಡೋಲಗದವರ್ಣನೆ ಜಯವಿಜಯರ ಶಾಪ, ಮತ್ತು ಭೂಲೋಕದಲ್ಲಿ ಅವರ ಜನನ, ದಶರಥನ ವಿವಾಹ – ಇವು ಆದಿಕಾಂಡದಲ್ಲಿ ಉಕ್ತವಾಗಿವೆ. ಮುಂದೆ ಬಾಲಕಾಂಡ, ಕ್ರೀಡಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸಮುದ್ರಕಾಂಡ, ಪಟ್ಟಾಭಿರಾಮಕಾಂಡ, ನಿಂದಾಕಾಂಡಗಳೆಂಬ ಭಾಗಗಳಿವೆ. ಸಮುದ್ರ ಕಾಂಡದಲ್ಲಿ ಮೈರಾವಣನ ಕಾಳಗದ ವೃತ್ತಾಂತವಿದೆ. ನಿಂದಾ ಕಾಂಡದಲ್ಲಿ ರಜಕನ ವಿಚಾರವಿದೆ. ಈ ರೀತಿಯ ವಿಭಾಗ ಯಾವ ಸಂಸ್ಕೃತ ರಾಮಾಯಣದಲ್ಲಿಯೂ ಇಲ್ಲ.

ಅಧ್ಯಾತ್ಮ ರಾಮಾಯಣ ಶಂಕರನಾರಾಯಣ ವಿರಚಿತ, ಭಾಮಿನಿಷಟ್ಪದಿಯಲ್ಲಿ ರಚಿತವಾಗಿದೆ. ವಾಲ್ಮಿಕಿಯ ಕಥೆಯನ್ನು ಕನ್ನಡದಲ್ಲಿ ರಚಿಸಿದ್ದಾನೆ. ಆರು ಕಾಂಡಗಳು ಮಾತ್ರವಿವೆ. ಇವನು ರಚಿಸದ ಉತ್ತರ ಕಾಂಡವನ್ನು ಶಾಲ್ಯದ ಕೃಷ್ಣರಾಜ ರಚಿಸಿದ್ದಾನೆ. ಆತನಿಗಿಂತ ಹಿಂದೆ ಎಂದರೆ ೧೮ ನೆಯ ಶತಮಾನದ ಪೂರ್ವಾರ್ಧದಲ್ಲಿದ್ದಿರಬಹುದು.

'ಮೂಲ ಬಲರಾಮಾಯಣ' ಹರಿದಾಸನೆಂಬ ಮಾಧ್ವಕವಿ ವಿರಚಿತ. ಕಾಲ ಸುಮಾರು ೧೭೫೦ ಭಾಮಿನಿ ಷಟ್ಪದಿಯಲ್ಲಿದೆ. ೧೩ ಸಂಧಿಗಳೂ ೭೩೭ ಪದ್ಯಗಳೂ ಇವೆ. ಇದರಲ್ಲಿ ಶ್ರೀರಾಮನು ರಾವಣ ಕುಂಭಕರ್ಣರ ಮೂಲ ಬಲವನ್ನು ನಾಶಪಡಿಸಿದ ವಿಷಯ ಉಕ್ತವಾಗಿದೆ. ಕೊನೆಯಲ್ಲಿ ನರಸಿಂಹನ ಅಂಕಿತವಿದೆ.

'ಶ್ರೀಮದ್ರಾಮಾಯಣ' ಅಥವಾ 'ಶ್ರೀರಾಮ ಕಥಾಭ್ಯುದಯ' ವೆಂಕಾಮಾತ್ಯ ವಿರಚಿತ. ವಾರ್ಧಕ ಷಟ್ಪದಿಯಲ್ಲಿದೆ. ಇದು ಒಂದು ಪ್ರೌಢ ಕಾವ್ಯ. ಹನುಮಂತನ ವರಪ್ರಸಾದದಿಂದ ಸಾಮ್ರಾಜ್ಯವನ್ನು ಪಡೆದೆನು ಎಂಬುದಾಗಿ ಹೇಳಿಕೊಂಡಿದ್ದಾನೆ. 'ಚತುರ್ವಿಧ ಕವಿತಾವಿಶಾರದ', 'ಗಾಂಧರ್ವ ಕಲಾನಿಧಿ' ಎಂಬುದು ಕವಿಯ ಬಿರುದುಗಳು. ಈತನು ಹಂಪೆಯಾಮಾತ್ಯನ ಮಗ, ಕಾಲ ಸುಮಾರು ೧೭೭೦.

ತಿರುಮಲೇಶ ಚರಿತೆ :– ಕವಿ ಮತ್ತು ಕಾಲ ತಿಳಿಯದು. 'ಸುರರ ರಕ್ಷಿಸಲೋಸುಗ ತಿರುಮಲೇಶನು ಹತ್ತು ಅವತಾರಗಳನ್ನೆತ್ತಿದ ಕತೆಯು' ಇದರಲ್ಲಿ ವರ್ಣಿತವಾಗಿದೆ. ತಿರುಮಲಾಧೀಶನ ಅಂಕಿತವೇ ಇದೆ. ಪ್ರಾರಂಭದಲ್ಲಿ ಮಾತ್ರ ಮಧುಕೈಟಭ ಸಂಹಾರ, ಕೂರ್ಮ ವರಾಹ ನರಸಿಂಹಾವತಾರಗಳ ಕಥೆ, ಸಂಗ್ರಹವಾಗಿದ್ದು ಮುಂದೆ ರಾಮ ಕಥೆ ವಿಸ್ತಾರವಾಗಿದೆ. ಒಟ್ಟು ೯ ಸಂಧಿಗಳೂ ೨೧೦೯ ಪದ್ಯಗಳೂ ಇವೆ.

ವರದ ವಿಠಲ ರಾಮಾಯಣ :– ೫೭ ಸಂಧಿಗಳು. ೩೩೮೨ ಪದ್ಯಗಳು, ಭಾಮಿನಿಷಟ್ಪದಿ. ಇಲ್ಲಿಯ ಕಥೆಯ ರೀತಿ ವಿಶಿಷ್ಟವಾಗಿದೆ. ಕೋಸಲ ದೇಶದ ಕುಶಲನೃಪನ ಮಗಳನ್ನು ದಶರಥನಿಗೆ ನಿಶ್ಚಯಿಸಿರಲು ರಾವಣನು ಅವಳನ್ನು ಅಪಹರಿಸುವುದರಲ್ಲಿದ್ದನು. ಆದರೂ ದೈವಯೋಗದಿಂದ ಅವರಿಬ್ಬರಿಗೂ ವಿವಾಹವಾಗುವುದು. ರಾವಣನ ಮಗನಾದ ಮೂಲಕಾಸುರನು ನಾರದರಿಂದ ಬೋಧಿತನಾಗಿ ವಿಭೀಷಣನನ್ನು ಸೋಲಿಸಿ ಅಯೋಧ್ಯೆಗೆ ತೆರಳಿ ಅಲ್ಲಿ ರಾಮಲಕ್ಷ್ಮಣಾದಿಗಳನ್ನು ಜಯಿಸಿ ಕುಶನಿಂದ ಮೃತನಾಗುತ್ತಾನೆ. ಇದರ ಕವಿಯ ಹೆಸರು ವರದ ವಿಠಲನಿರಬಹುದು.

ಅಧ್ಯಾತ್ಮರಾಮಾಯಣ :– ಮುಮ್ಮಡಿ ಕೃಷ್ಣರಾಜ ವಿರಚಿತ, ಇದೊಂದು ಗದ್ಯಗ್ರಂಥ. ೭ ಕಾಂಡಗಳೂ ೫ ಸಂಧಿಗಳೂ ೮೫೦೦ ಗ್ರಂಥ ಸಂಖ್ಯೆಯುಳ್ಳದ್ದೂ ಆಗಿದೆ.

ಅದ್ಭುತ ರಾಮಾಯಣ ಮತ್ತು ರಾಮಾಶ್ವಮೇಧ :– ಇವು ಹಳಗನ್ನಡ ಗದ್ಯ ಗ್ರಂಥಗಳು. ಶ್ರೀರಾಮಪಟ್ಟಾಭಿಷೇಕವು ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿರುವ ಕಾವ್ಯ. ೫ ಸಂಧಿಗಳೂ ೨೪೭ ಪದ್ಯಗಳೂ ಇವೆ. ಇವು ಮೂರೂ ಮುದ್ದಣನೆಂದು ಪ್ರಸಿದ್ಧವಾಗಿರುವ ನಂದಳಿಕೆ ಲಕ್ಷ್ಮೀನಾರಣಪ್ಪನಿಂದ ರಚಿತವಾದುವು. ಈತನ ಕಾಲ ೧೮೭೦ ರಿಂದ ೧೯೦೧.

ರಾಮಾಯಣ ಸಂಗ್ರಹ:– ಕ್ರಿ. ಶ. ೧೯೧೯ ರಲ್ಲಿ ಹೆಚ್. ಲಿಂಗರಾಜ ಅರಸರಿಂದ ರಚಿತವಾದುದು. ೧೧ ಸಂಧಿಯುಳ್ಳದ್ದು.

ಶೇಷರಾಮಾಯಣ:– ಚಾಮರಾಜ ಒಡೆಯರ ಆಸ್ಥಾನ ಕವಿಗಳಾದ ನೋಸಲೆ ಅಯ್ಯಾ ಶಾಸ್ತ್ರಿಗಳವರಿಂದ ರಚಿತವಾದುದು. ಉತ್ತರ ರಾಮಾಯಣದ ರಾಮಾಶ್ವಮೇಧದ ಕಥಾಭಾಗವನ್ನುಳ್ಳದ್ದು. ೩೪ ಸಂಧಿಗಳೂ ೧೩೪೦ ಪದ್ಯಗಳೂ ಇವೆ.

ಇಪ್ಪತ್ತನೆಯ ಶತಮಾನದಲ್ಲಿ ಪ್ರಸಿದ್ಧವಾದ ಕನ್ನಡ ರಾಮಾಯಣವೆಂದರೆ 'ರಾಮಾಯಣ ದರ್ಶನಂ'. ಇತರ ಕವಿ ಕುವೆಂಪು ಅವರು. ಕೆ.ವಿ. ಪುಟ್ಟಪ್ಪ ಎಂಬುದು ಇವರ ಪೂರ್ಣ ನಾಮಧೇಯ. ಇವರು ಮಲೆನಾಡಿನವರು. ಮೈಸೂರು ವಿಶ್ವ ವಿದ್ಯಾನಿಲಯಲ್ಲಿ ಪ್ರಾಧ್ಯಾಪಕರೂ ಆಮೇಲೆ ವಿಶ್ವ ವಿದ್ಯಾನಿಲಯದ ಕುಲಪತಿಗಳೂ ಆಗಿದ್ದು ವಿಶ್ರಾಂತರಾಗಿದ್ದಾರೆ. ಇವರು ಕನ್ನಡದ ರಾಷ್ಟ್ರಕವಿಗಳು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇವರು ಪ್ರವೇಶಿಸದ ಭಾಗಗಳೇ ಇಲ್ಲ. ಇವರಿಗೆ ಭಾರತ ಅಕಾಡೆಮಿಯ ಪ್ರಶಸ್ತಿಯೂ ಜ್ಞಾನಪೀಠ ಪ್ರಶಸ್ತಿಯೂ ದೊರತಿವೆ. ಇವರು 'ರಾಮಾಯಣದರ್ಶನಂ' ಎಂಬ ಮಹಾಕಾವ್ಯವನ್ನು ರಚಿಸಿದ್ದಾರೆ. ಇದು ಮಹಾಛಂದಸ್ಸಿನಲ್ಲಿ ರಚಿತವಾಗಿದೆ. ಕತೆಯ ತಡಿಕೆಯು ವಾಲ್ಮೀಕಿಯದಾಗಿದ್ದರೂ ಕಾವ್ಯವು ಕವಿಯ ಅದ್ಭುತ ದರ್ಶನದಿಂದ ಆವಿರ್ಭವಿಸಿದುದಾಗಿದೆ. ಅದನ್ನು ಅವರೇ ಮುಂದಿನ ವಾಕ್ಯಗಳಲ್ಲಿ ಸ್ಪಷ್ಟಪಡಿಸಿದ್ದಾರೆ.

> ವಾಲ್ಮೀಕಿಯುಲಿದಕಥೆಯಾದೊಡಂ ಕನ್ನಡದಿ
> ಬೇರೆ ಕಥೆಯೆಂಬಂತೆ ಬೇರೆ ಮೆಯ್ಯಾಂತಂತೆ
> ಮರುವುಟ್ಟುವಡೆದಂತೆ ಮಾಡಿದೀ ಕಾವ್ಯಮಂ
> ವಿಶ್ವವಾಣಿಗೆ ಮುಡಿಯ ಮಣಿ ಮಾಡಿರ್ಪೆ

'ರಾಮಾಯಣದರ್ಶನ' ದಲ್ಲಿ ರಾಮಪಟ್ಟಾಭಿಷೇಕದವರೆಗಿನ ಕಥೆಯೂ ಮಾತ್ರವಿದೆ. ವಾಲ್ಮೀಕಿಯ ಆರು ಕಾಂಡಗಳನ್ನೂ ಇವರು 'ಅಯೋಧ್ಯಾ ಸಂಪುಟಂ, ಕಿಷ್ಕಿಂಧಾಸಪುಂಟಂ, ಲಂಕಾಸಂಪುಟಂ, ಶ್ರೀಸಂಪುಟಂ ಎಂಬ ನಾಲ್ಕು ಭಾಗಗಳಲ್ಲಿ ರಾಮರೂಪದ ಪರಾತ್ಪರನ ಪುರುಷೋತ್ತಮನ ಲೋಕಲೀಲಾದರ್ಶನವನ್ನು ಪ್ರಕಟಿಸಿದ್ದಾರೆ.

ರಾಮಾಯಣ ದರ್ಶನವು ಶವಿಕ್ರತುವಿನಿಂದ ಪ್ರಾರಂಭವಾಗುತ್ತದೆ. ಕವಿಯ ಕಾವ್ಯ ರಚನೆಗೆ 'ಚಿತ್‌ಚಿತ್‌ರಸಾಬ್ಧಿಯಂ' ಸೇರುವುದೇ ಗುರಿ. ಅದು ಗುರುಕೃಪೆಯಿಂದಲೇ ಸಾಧ್ಯ. ಗುರುಸ್ತವನವಾದ ಮೇಲೆ ಪ್ರಾಚೀನ ಕವಿಸಮೂಹದ ಸ್ತವನವಿದೆ. ಆ ಪರಂಪರೆಯಲ್ಲಿ ವಾಲ್ಮೀಕಿಯೇ ಅಲ್ಲದೆ ಸಂಸ್ಕೃತ ಮತ್ತು ಕನ್ನಡ ಕವಿಗಳೂ ಇದ್ದಾರೆ. ತುಲಸೀದಾಸ ಮೇಣ್ ಕೃತ್ತಿವಾಸ, ನನ್ನಯ, ಫಿರ್ದೂಸಿ, ಕಂಬ, ಅರವಿಂದರೂ, ಸ್ತುತರಾಗಿದ್ದಾರೆ. ಹಾಗೆಯೇ ಹೋಮರ್ ಮಿಲ್ಟನ್, ಡಾಂಟೆಗಳೂ ಸ್ತೋತ್ರದಲ್ಲಿ ಸ್ಥಾನಗಳನ್ನು ಗಳಿಸಿದ್ದಾರೆ. ಅವರ ಪ್ರಭಾವವೆಲ್ಲ ಕವಿಯಮೇಲೆ ಸ್ಪಷ್ಟವಾಗಿದೆ. ಈ ಪಂಕ್ತಿಯಲ್ಲಿ ನಾಗಚಂದ್ರನ ಹೆಸರಿಲ್ಲ. ಅವನ ಅಥವಾ ಮತ್ತಾವುದಾದರೂ ಜೈನರಾಮಾಯಣದ ಪ್ರಭಾವವೂ ಅಲ್ಲಿ ಕಾಣುತ್ತದೆ. ಕವಿಯ ಪ್ರಕಾರ ಇದು ಬಹಿರ್ಘಟನೆಯಂ ಪ್ರತಿಕ್ಷಿಸುವಾ ಲೌಕಿಕ ಚರಿತ್ರೆಯಲ್ಲ. ಅಲೌಕಿಕ ನಿತ್ಯಸತ್ಯಗಳನ್ನು ಮಹಾ ಛಂದಸ್ಸಿನಲ್ಲಿ ಚಿತ್ರಿಸುವ ಮೇರುಕೃತಿ, ಜಗದ್ಭವ್ಯ ರಾಮಾಯಣಂ. ಲೌಕಿಕಾತೀತವಾದ ನಿತ್ಯಸತ್ಯಗಳನ್ನು ಪ್ರದರ್ಶಿಸುವುದೇ ಇದರ ಉದ್ದೇಶ. ಇಲ್ಲಿಯ ಕವಿಕೆ ನಿಮಿತ್ತಮಾತ್ರ. ಆತ್ಮಕ್ಕೆ ಶರೀರವಿದ್ದಂತೆ. ವಾಸ್ತವವಾಗಿ ರಾಮನ ಕಥೆಯ ಪಂಜರದಲ್ಲಿ ಪುರುಷೋತ್ತಮನಾದ ರಾಮಪರಾತ್ಪರನ ಲೋಕಲೀಲಾದರ್ಶನಂ. ಆ ರಾಮನಿಗೆ ಪ್ರಾಣಕ್ಕಿಂತ ಪ್ರಿಯವಾದುದು ಧರ್ಮ. ಅದನ್ನು ಲೀಲಾರೂಪದಲ್ಲಿ ಪ್ರದರ್ಶಿಸುವುದೇ ಅವನ ಅವತಾರದ ರಹಸ್ಯವೂ ಕೂಡ.

ಈ ದೃಷ್ಟಿಯಿಂದ ರಚಿತವಾದ 'ದರ್ಶನ'ದ ನಾಲ್ಕು ಸಂಪುಟಗಳಲ್ಲಿ ವಿಧವಾದ ನಾಮಗಳಿಂದಿರುವ ಸಂಚಿಕೆಗಳಿಂದ ಕೂಡಿದೆ. ಈ ವಿಧವಾದ ವಿಭಾಗ ಕ್ರಮವಾಗಲಿ ನಾಮಕರಣವಾಗಲಿ ಇದುವರೆಗಿನ ಮತ್ತಾವ ರಾಮಾಯಣಗಳಲ್ಲೂ ಆಗಿಲ್ಲ. ಮೇಲೆ ಹೇಳಿರುವ ಎಲ್ಲ ಕವಿವರ್ಯರ ಸಾರವತ್ತಾದ ಭಾಗಗಳನ್ನು ಆರಿಸಿಕೊಂಡು ಕವಿಯು ತಮ್ಮದೇ ಆದ ದರ್ಶನವನ್ನು ಲೋಕಕ್ಕೆ ಸಾರಿದ್ದಾರೆ. ಆದುದರಿಂದ ಈ ಕಾವ್ಯವು ಕೆಲವು ಸನ್ನಿವೇಶಗಳಲ್ಲಿಯೂ ಪಾತ್ರರಚನೆಯಲ್ಲಿಯೂ ಮೂಲ ವಾಲ್ಮೀಕಿ ರಾಮಾಯಣಕ್ಕಿಂತ ಬೇರೆಯಾಗಿದೆ.



ಶಬರಿ ಶ್ರೀರಾಮ ಸಂದರ್ಶನಂ'

ಇದರಲ್ಲಿ ಬಾಲಕಾಂಡದಲ್ಲಿ ಬರುವ ಉಪಕಥೆಗಳ ವಿಚಾರವಿಲ್ಲ. ಕೊನೆಯ ಉತ್ತರಕಾಂಡದ ಭಾಗವೂ ಇಲ್ಲ, ಎಲ್ಲ ಪಾತ್ರಗಳೂ ಭೂಮಿತ್ವದಿಂದ ದೈವತ್ವಕ್ಕೆ ಏರುವುವಾಗಿವೆ. ಅಹಲ್ಯೆ ಮತ್ತು ಶಬರಿಯರ ಪ್ರಸಂಗಗಳು ಆಕರ್ಷಕವಾಗಿವೆ. ಮಂಥರೆಯ ಪಾತ್ರವು ಕಥೆಯ ಮೊದಲಿಂದ ಕೊನೆಯವರೆಗೆ ಬೆಳೆದುಬಂದಿದೆ. ಅವಳು ರಾಮನ ತೊಂದರೆಗೆ ಕಾರಣಳಲ್ಲ, ಕರಣಳು ಮಾತ್ರ. ಅಂತರಾತ್ಮದ ಪುಣ್ಯಲಕ್ಷ್ಮಿ, ಭರತನ ವಿಷಯದಲ್ಲಿ ವಿಶೇಷಮಮತೆಯುಳ್ಳವಳು. ಆ ದೃಷ್ಟಿಯಿಂದ ನೋಡಿದರೆ ಅವಳು ದೂಷಿತಳಾಗಿ ಕಾಣುವುದಿಲ್ಲ. ಭರತನಿಗಾಗಿ ರಾಜ್ಯ ಸಂಪಾದನೆಯಲ್ಲಿ ಹೇಗೆ ಪ್ರಧಾನಳೋ ಹಾಗೆಯೇ ಅವನ ಹಿತಕರವಾದ ರಾಮನನ್ನು ಹಿಂದಕ್ಕೆ ಕರೆತರುವ ಕಾರ್ಯದಲ್ಲಿಯೂ ಮುಂದಾಳಾಗಿರುತ್ತಾಳೆ. ಪಾದುಕಾ ಪರಿಗ್ರಹಣವಾದ ಮೇಲೆ ಅಗ್ನಿಪ್ರವೇಶ ಮಾಡಿದ್ದರೂ ಅವಳೇ ರೂಪಾಂತರದಲ್ಲಿ, ಲಂಕೆಯಿಂದ ಬಂದ ರಾಮನ ಬಗ್ಗೆ ಭರತನಿಗೆ ಮೊದಲು ತಿಳಿಸಿದವಳು. ರಾಮನ ಮಹಾಮಹಿಮೆಯನ್ನು ವಿಸ್ತರಿಸುವುದಕ್ಕೆ ಅವಳೇ ಕಾರಣಳು. ಮಮತೆಯ ಮಡುವಾದ ಅವಳು ಇಲ್ಲಿ ದೋಷಿಯಾಗಿ ಕಾಣುವುದೇ ಇಲ್ಲ.

ಚಂದ್ರನಖಿ ಶೂರ್ಪಣಖಿಯಾದುದು ರಾಮನ ಆಗ್ರಹದ ಆವೇಶದಿಂದಲ್ಲ. ಆವೇಶದಿಂದ ಕಾರ್ಯವನ್ನು ಮಾಡಲು ಅರ್ಭಟಿಸಿದ ಅವಳನ್ನು ಲಕ್ಷ್ಮಣನು ತಡೆಯುವುದಕ್ಕೆ ಹೋದಾಗ, ಆಕಸ್ಮಿಕವಾಗಿ ಉಂಟಾದ ಆಘಾತವಿದು.

ಇಲ್ಲಿಯ ವಾಲಿ ರಾಮರ ಸಂವಾದ ಬಹು ಮನೋಜ್ಞವಾಗಿದೆ. ಬೆನ್ನ ಹಿಂದಿನಿಂದ ಹೊಡೆದ ರಾಮನ ಕೃತ್ಯವನ್ನು ಕುರಿತು ವಾಲಿ ಆಕ್ಷೇಪಿಸಿದಾಗ ರಾಮನು ಸ್ವಲ್ಪಕಾಲ ವಾದ ಮಾಡಿದರೂ ಕೊನೆಗೆ ತನ್ನ ತಪ್ಪನ್ನು ಒಪ್ಪಿಕೊಳ್ಳುವುದು ರಾಮನ ಪಾತ್ರಕ್ಕೆ ಶೋಭೆಯನ್ನು ತಂದಿದೆ.

ಇಲ್ಲಿಯ ರಾವಣನ ಪಾತ್ರವೂ ಬಹು ಉದಾತ್ತಭಾವವನ್ನು ತಾಳಿದೆ. ಕವಿಯ ಪ್ರಕಾರ ರಾಮ ರಾವಣರಿಬ್ಬರೂ ಒಂದೇ ಶಕ್ತಿಯ ವಿವಿಧ ಮುಖಗಳು. ಚಿತ್ ಮತ್ತು ಅಚಿತ್‌ಗಳು. ಚಿತ್ತು ಅಚಿತ್ತನ್ನು ಗೆಲ್ಲುವುದೇ ಇಲ್ಲಿ ವಿವಿಕ್ತವಾದ ವಿಷಯ. ರಾವಣನು ತನ್ನ ತಪಸ್ಸಿದ್ಧಿಯಿಂದ ಸೀತಾದೇವಿಯು ಲಕ್ಷ್ಮಿಯ ಅವತಾರವೆಂದು ತಿಳಿದು ಅವಳನ್ನು ರಾಮನನ್ನು ಸೋಲಿಸಿದ ಮೇಲೆ ಹಿಂದಿರುಗಿಸಲೆಂದೇ ರಣರಂಗಕ್ಕೆ ತೆರಳುವನು. ಆದರೆ ಅಚಿತ್ ಚಿತ್ತನ್ನು ಗೆಲ್ಲಲು ಸಾಧ್ಯವಿಲ್ಲ. ಅಚಿತ್ತಿಗೆ ಚಿತ್ತಿನ ಅನುಭವವಾದ ಮೇಲೆ ತಾನೇ ತನ್ನ ಅಚಿತ್ ಭಾವವನ್ನು ನೀಗಿಕೊಂಡು ಚಿತ್ತೊಡನೆ ಕೂಡುವುದು, ರಾಮಬಾಣದಾಕಾರದಲ್ಲಿ ರಾಮನ ಶಕ್ತಿಯು ರಾವಣನ ಹೃದಯವನ್ನು ಸೇರಿದೊಡನೆಯೇ ರಾವಣನು ಇಲ್ಲವಾಗುವನು.

ಇಲ್ಲಿಯ ಸೀತೆಯ ಅಗ್ನಿಪ್ರವೇಶಭಾಗವು ನವೀನವಾಗಿದೆ. ಸೀತೆಯನ್ನು ಪಾಲಿಸುವ ನೆಪದಿಂದ ರಾಮನು ತನ್ನನ್ನೂ ಪರೀಕ್ಷಿಸಿಕೊಂಡು ಲೋಕತೃಪ್ತಿಗೆ ಲೋಕಮರ್ಯಾದೆಯನ್ನೂ ಪಾಲಿಸುವನು. ಅವನು ಸಚ್ಚಿದಾನಂದ ಸ್ವರೂಪನೂ ಸರ್ವತಂತ್ರ ಸ್ವತಂತ್ರನೂ ಅಲ್ಲವೆ.

ಕವಿಯು ಈಗಾಗಲೇ ಸುಪ್ರಸಿದ್ಧನಾಗಿರುವ ಆದರ್ಶ ನಾಯಕನನು ಆರಿಸಿಕೊಂಡು ಅವನನ್ನು ಮತ್ತೂ ಆದರ್ಶಯುತನನ್ನಾಗಿ ಮಾಡುವುದಕ್ಕಾಗಿ ೨೦ ನೆಯ ಶತಮಾನದ ಆದರ್ಶ ಗುಣಗಳಾಗಿ ವಿವಿಧ ಕ್ಷೇತ್ರಗಳಲ್ಲಿ ಪ್ರಸಾರಗೊಂಡಿರುವ ದರ್ಶನ, ಭಕ್ತಿ, ಸಮನ್ವಯ ಭಾವನೆ, ಅಹಿಂಸೆ, ಸಂಪೂರ್ಣ ದೃಷ್ಟಿ, ಸರ್ವೋದಯ, ಸಮಾನ ಭಾವ – ಮೊದಲಾದುವುಗಳನ್ನು ಅವನಲ್ಲಿಯೂ ಅವನ ಆಚರಣಗಳಲ್ಲಿಯೂ ಸಮನ್ವಯಗೊಳಿಸಿ ದೇವಮಾನವತ್ವದ ಐಕ್ಯವನ್ನು ಪ್ರದರ್ಶನ ಮಾಡಿದ್ದಾರೆ. ಇದರಿಂದ 'ರಾಮಾಯಣ ದರ್ಶನ'ವು ಸರ್ವಭಾಷಾ ಸರಸ್ವತಿಯ ಪ್ರಸಾದದಿಂದ ಕನ್ನಡದ ಸಿರಿಮುಡಿಯ ಕಣ್ಮಣಿಮೆಯಾಗಿದೆ. ಈ ಶತಮಾನದ ಮೇರುಕೃತಿಯಾಗಿದೆ.

ಈ ಶತಮಾನದ ಆದಿಯಲ್ಲಿ ರಚಿತವಾದ ದೇವಶಿಖಾಮಣಿ ಅಳಹಿಯಸಿಂಗರಾಚಾರ್ಯರ ವಾಲ್ಮೀಕಿ ರಾಮಾಯಣದ ಗದ್ಯಾನುವಾದವನ್ನು ಮರೆಯಲಾಗುವುದಿಲ್ಲ. ಇದು ಬಹು ಸರಳವಾದ ಗದ್ಯ ಶೈಲಿಯಲ್ಲಿದೆ. ಮೂಲವನ್ನು ಬಹುಮಟ್ಟಿಗೆ ನಿಕಟವಾಗಿ ಅನುಸರಿಸುತ್ತದೆ. ಹಾಗೆಯೇ ಜನಪ್ರಿಯವಾಗಿದೆ.

ಹಾಗೆಯೇ ಕುವೆಂಪು ಅವರ ಜನಪ್ರಿಯ ರಾಮಾಯಣವು ಗದ್ಯದಲ್ಲಿ ಹೊಸದಾಗಿ ಶಿಕ್ಷಿತರಾದ ವಯಸ್ಕರಿಗಾಗಿ ಆ ಸಮಿತಿಯವರಿಂದಲೇ ಪ್ರಕಟವಾಗಿದೆ. ಇದು ರಾಮಾಯಣ ಸಂಗ್ರಹ.



(8ನೇ ಪುಟದಿಂದ)

ವ್ಯವಸ್ಥೆ ಪಡಿಸಲಾಯಿತು. 'ಭರತನು ಸುಗ್ರೀವನನ್ನು ಕುರಿತು ವಾನರೇಂದ್ರ, ಶ್ರೀರಾಮನ ಪಟ್ಟಾಭಿಷೇಕಕ್ಕೆ ನಾಲ್ಕು ಸಮುದ್ರ ಜಲವನ್ನು, ಪುಣ್ಯತೀರ್ಥಗಳನ್ನೂ ತರಿಸುವ ಏರ್ಪಾಡು ನಿನ್ನದು' ಎಂದನು.

ಪಟ್ಟಾಭಿಷೇಕಕ್ಕೆ ಎಲ್ಲವೂ ಸಿದ್ಧವಾಯಿತು. ಕುಲಪುರೋಹಿತರಾಗಿ ಜ್ಞಾನವೃದ್ಧರೂ, ವಯೋವೃದ್ಧರೂ ಆದ ವಸಿಷ್ಠರು ಬಂದರು. ಶ್ರೀರಾಮನನ್ನು ಸೀತಾ ಸಮೇತನಾಗಿ ರತ್ನಸಿಂಹಾಸನದಲ್ಲಿ ಕೂರಿಸಿದರು. ಅಷ್ಟವಸುಗಳು ದೇವೇಂದ್ರನಿಗೆ ಅಭಿಷೇಕ ಮಾಡಿದಂತೆ, ವಸಿಷ್ಠ, ವಾಮದೇವ ಜಾಬಾಲಿ, ಕಾಶ್ಯಪ, ಕಾತ್ಯಾಯನ ಸುಯಜ್ಞ, ಗೌತಮ, ವಿಜಯ ಎಂಬ ಅಷ್ಟ ಪ್ರಧಾನ ಪುರೋಹಿತರು ಶಾಸ್ತ್ರರೀತಿಯಲ್ಲಿ ಅಭಿಷೇಕ ಮಾಡಿದರು. ಅನಂತರ ಋತ್ವಿಕ್ಕುಗಳು, ಬ್ರಾಹ್ಮಣರು, ಕನ್ಯೆಯರು, ಎಲ್ಲರೂ ವಸಿಷ್ಠರು ಹೇಳಿದಂತೆ ಅಭಿಷೇಕ ಮಾಡಿದರು. ಕುಲಕ್ರಮಾಹಿತವಾದ ಬಂದ ದಿವ್ಯ ರತ್ನಕಿರೀಟವನ್ನು ವಸಿಷ್ಠರು, ರಾಮನ ತಲೆಯ ಮೇಲೆ ಇಟ್ಟರು. ಅಭಿಷೇಕ ಕಾಲದಲ್ಲಿ ಶತ್ರುಘ್ನನು, ಬಿಳಿಯಕೊಡೆ ಹಿಡಿದನು. ಸುಗ್ರೀವ ವಿಭೀಷಣರು ಚಾಮರ ಸೇವೆ ಮಾಡಿದರು. ದೇವೇಂದ್ರನು ಕಳುಹಿಸಿದ ಸುವರ್ಣ ರತ್ನಹಾರವನ್ನು ವಾಯುದೇವನು ಶ್ರೀರಾಮನಿಗೆ ಅರ್ಪಿಸಿದನು. ದೇವ ಗಂಧರ್ವರು ಗಾನಮಾಡಿದರು. ಅಪ್ಸರೆಯರು ನರ್ತಿಸಿದರು. ಭೂಮಿಯು ಸಸ್ಯಗಳಿಂದ ಸಮೃದ್ಧವಾಯಿತು. ಅಭಿಷೇಕವಾದ ಮೇಲೆ, ವಿಭೀಷಣ, ಸುಗ್ರೀವ, ಹನುಮಂತಾದಿಗಳಿಗೆ ಅವರವರ ಯೋಗ್ಯತಾನುಸಾರ ಬಹುಮಾನ ಕೊಟ್ಟು, ಸತ್ಕರಿಸಲಾಯಿತು.

ಶ್ರೀರಾಮನು ಹೀಗೆ ತನ್ನ ತಮ್ಮಂದಿರೊಡನೆ ಹತ್ತು ಸಾವಿರ ವರ್ಷ ರಾಜ್ಯಭಾರ ಮಾಡಿದನು. ಅಶ್ವಮೇಧ, ವಾಜಪೇಯಾದಿ ಯಾಗಗಳನ್ನು ಮಾಡಿದನು. ಬ್ರಾಹ್ಮಣರಿಗೆ ಭೂರಿ ದಕ್ಷಿಣೆಗಳನ್ನು ಕೊಟ್ಟು ತೃಪ್ತಿಪಡಿಸಿದನು. ಶ್ರೀರಾಮ ಆಳ್ವಿಕೆಯಲ್ಲಿ ಸಮಸ್ತರೂ ಸುಖಸಂತೋಷ ಶಾಂತಿಯಿಂದ ಇದ್ದರು. ಕಳ್ಳಕಾಕರ ಭೀತಿಯಿಲ್ಲ. ಯಾರಿಗೂ ಯಾವ ಅನರ್ಥವೂ ಸಂಭವಿಸುತ್ತಿರಲಿಲ್ಲ. ಸ್ತ್ರೀಯರಿಗೆ ವೈಧವ್ಯ ಇರುತ್ತಿರಲಿಲ್ಲ. ಯಾರಿಗೂ ಹಿಂಸೆ ಇರುತ್ತಿರಲಿಲ್ಲ. ಎಲ್ಲರೂ ಧರ್ಮನಿರತರಾಗಿದ್ದರು. ಎಲ್ಲರಿಗೂ ಶ್ರೀರಾಮನು ಆದರ್ಶಯುತನಾಗಿದ್ದನು. ಗಿಡಮರಗಳು ಎಲ್ಲಕಾಲದಲ್ಲಿ ಪುಷ್ಪ, ಫಲಭರಿತವಾಗಿರುತ್ತಿದ್ದುವು. ಪ್ರಜೆಗಳೆಲ್ಲರೂ ಸರ್ವಲಕ್ಷಣ ಸಂಪನ್ನರಾಗಿ, ಧರ್ಮಪರಾಯಣರಾಗಿ ಸತ್ಯವಂತರಾಗಿ, ನಿತ್ಯ ಸುಖಿಗಳಾಗಿದ್ದರು.

## ಕೋಯಿಲ್ ಆಳ್ವಾರ್ ತಿರುಮಂಜನ

ತಿರುಮಲೆಯಲ್ಲಿ ಮಾರ್ಚ್ 19 ರಂದು ಕೋಯಿಲ್ ಆಳ್ವಾರ್ ತಿರುಮಂಜನ ನಡೆಯುವುದರಿಂದ ಅಂದು ಎರಡುಸಾವಿರ ರೂಗಳ ಕಲ್ಯಾಣೋತ್ಸವವನ್ನು ಮನ್ನಾ ಮಾಡಲಾಗಿದೆಯೆಂದು ವರದಿಯಾಗಿದೆ.

ಅಂದು ರೂ. 500 ಗಳ ಪ್ರತ್ಯೇಕ ಕಲ್ಯಾಣೋತ್ಸವ, ವಾಹನ ಸೇವೆಗಳು, ಉಯ್ಯಾಲೆ ಸೇವೆಗಳು ಮಾತ್ರ ಯಥಾಪ್ರಕಾರ ನಡೆಯುವುವು.

ಮಾರ್ಚ್ 22 ರಂದು ತಿರುಮಲೆಯಲ್ಲಿ ಉಗಾದಿ ಆಸ್ಥಾನವು ನಡೆಯುವುದು. ಉಗಾದಿಯ ದಿನ ಕಲ್ಯಾಣೋತ್ಸವ, ವಸಂತೋತ್ಸವ ವಾಹನ ಸೇವೆಗಳು, ಬ್ರಹ್ಮೋತ್ಸವ, ಉಯ್ಯಾಲೋತ್ಸವಗಳು ನಡೆಯುವುದಿಲ್ಲ ಎಂದು ತಿಳಿಸಲಾಗಿದೆ.

## ಭಕ್ತಿ ಸಾಂಸ್ಕೃತಿಕ ಕಾರ್ಯಕ್ರಮ

ತಿ. ತಿ. ದೇ. ಗಳ ವಿವಿಧ ಸಾಂಸ್ಕೃತಿಕ ಸಂಸ್ಥೆಗಳ ವತಿಯಿಂದ ಭಕ್ತಿ ಸಾಂಸ್ಕೃತಿಕ ಕಾರ್ಯಕ್ರಮವೊಂದು 19–2–85 ರ ಸಂಜೆ ತಿ. ತಿ. ದೇ. ಪರಿಪಾಲನಾಭವನದ ಹಿಂದಿನ ಬಯಲು ಸಂಭಾಗಣದಲ್ಲಿ ಯಶಸ್ವಿಯಾಗಿ ನಡೆಯಿತು.

ಹಿಂದೂ ಧರ್ಮರಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎಸ್. ಲಕ್ಷ್ಮಣಯ್ಯನಾಯುಡು ಅವರ, ಭಗವದ್ಗೀತಾ ಪಠಣದೊಂದಿಗೆ ಆರಂಭವಾದ ಕಾರ್ಯಕ್ರಮವು, ಅನ್ನಮಾಚಾರ್ಯ ಪ್ರಾಜೆಕ್ಟ್‌ನ 'ಅದಿವೊ ಅಲ್ಲದಿವೊ' ಸಮೂಹಗಾಯನದಲ್ಲಿ ನಡೆದು, ಶ್ರೀವೆಂಕಟೇಶ್ವರ ಸಂಗೀತ ನೃತ್ಯ ಕಲಾಶಾಲೆಯವರ ನೃತ್ಯ ಸಂಗೀತ ಕಾರ್ಯಕ್ರಮದಲ್ಲಿ ಮುಂದುವರೆಯಿತು. ಜಯದೇವನ ದಶಾವತಾರ ಅಷ್ಟಪದಿಯ ನೃತ್ಯರೂಪಕದ ನಂತರ ಅನ್ನಮಯ್ಯ, ಪುರಂದರದಾಸ, ತ್ಯಾಗರಾಜ, ಮುತ್ತುಸ್ವಾಮಿ ದೀಕ್ಷಿತರು ಪಟ್ನಂ ಸುಬ್ರಹ್ಮಣ್ಯ ಅಯ್ಯರ್ ಅವರ ಕೃತಿಗಳನ್ನು ಸಮರ್ಪಿಸಲಾಯಿತು. ದಾಸಸಾಹಿತ್ಯ ಪ್ರಾಜೆಕ್ಟಿನ ವತಿಯಿಂದ ದಾಸಪದ ಸೌರಭ, ಅನ್ನಮಾಚಾರ್ಯ ಪ್ರಾಜೆಕ್ಟಿನ ಗೀತಮಾಲಿಕೆ ಶ್ರೀ ವೆಂಕಟೇಶ್ವರ ಸಂಗೀತ ನೃತ್ಯ ಕಲಾಶಾಲೆಯ ತಂತ್ರೀಲಯ ವಿನ್ಯಾಸಗಳ ನಂತರ ಅನ್ನಮಯ್ಯ ಕಥಾ ರೂಪಕ ಹೆಚ್ಚು ಜನರನ್ನು ಆಕರ್ಷಿಸಿತು. (ಚಿತ್ರಗಳನ್ನು ಒಳ ರಕ್ಷಾಪತ್ರದಲ್ಲಿ ಕಾಣಬಹುದು.)



## ಶೀಘ್ರದಲ್ಲಿ ವಜ್ರಕಿರೀಟ

ಇಡೀ ಭರತಖಂಡದಲ್ಲೇ ಅತ್ಯುನ್ನತವಾದ ಗೋಪುರವು ತಿರುಮಲೆಯಲ್ಲಿ 3 ಕೋಟಿ ರೂಗಳ ವೆಚ್ಚದಲ್ಲಿ ನಿರ್ಮಾಣವಾಗಲಿದೆ ಯೆಂದು ತಿ.ತಿ.ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ ಕೆ.ಡಿ.ವಿ. ಸತ್ಯನಾರಾಯಣ ರಾಜು ಅವರು ಫೆ. 20 ರಂದು ತಿಳಿಸಿದರು.

ಪಾಪನಾಶನಂ ರಸ್ತೆ ಹಾಗೂ ಸನ್ನಿಧಿ ರಸ್ತೆ ಸೇರುವಲ್ಲಿ 247''–6'' ಎತ್ತರದ ಗೋಪುರವನ್ನು ನಿರ್ಮಿಸಬೇಕೆಂದು ಆಡಳಿತ ನಿರ್ವಾಹಕ ಮಂಡಳಿ ತೀರ್ಮಾನ ಮಾಡಿದೆಯೆಂದು ಅವರು ವಿವರಿಸಿದರು.

ಹೊಸ ಸರತಿಯ ಸಾಲಿನ ಕೋಣೆಗಳ 'ವೈಕುಂಠ'ದಲ್ಲಿ ಕಾದು ಕುಳಿತ ಯಾತ್ರಿಕರಿಗೆ ಭಕ್ತಿ ಕಾರ್ಯಕ್ರಮಗಳನ್ನು ವೀಕ್ಷಿಸಲು ಅನುಕೂಲವಾಗುವಂತೆ ಮಂಟಪವೊಂದನ್ನು ಕಲ್ಲಿನಲ್ಲಿ ಕಟ್ಟಲಾಗುವುದೆಂದೂ (ಅಂದಾಜುವೆಚ್ಚ ನಲವತ್ತು ಲಕ್ಷ ರೂಗಳು) ಅದರ ಎರಡೂ ಬದಿಗಳಲ್ಲಿ ಗಜೇಂದ್ರ ಮೋಕ್ಷ ಹಾಗೂ ಕಾಳಿಂಗ ಮರ್ದನಗಳ ಶಿಲ್ಪಗಳನ್ನು ಕೆತ್ತಲಾಗುವುದೆಂದೂ ತಿಳಿಸಿದರು.

ಆಡಳಿತ ನಿರ್ವಾಹಕ ಮಂಡಳಿಯು, ಶ್ರೀವೆಂಕಟೇಶ್ವರಸ್ವಾಮಿಯ ಹೊಸ ವಜ್ರಕಿರೀಟ ನಿರ್ಮಾಣದಲ್ಲಿ ತೀರ್ಮಾನವನ್ನು ತೆಗೆದುಕೊಂಡಿದೆಯೆಂದೂ, ಬೆಂಗಳೂರಿನ ಶ್ರೀ ಸೂರಜ್‌ಮಲ್ ಅವರು ಉಚಿತವಾಗಿ ಮಾಡಿಕೊಡಲು ಮುಂದೆ ಬಂದಿರುವುದನ್ನು ಒಪ್ಪಲಾಗಿದೆಯೆಂದೂ, ಕೆಲಸ ಒಂದು ವಾರದೊಳಗೇ ಆರಂಭ ಆಗುವುದೆಂದೂ ಅವರು ವಿವರಿಸಿದರು.

ತಿರುಮಲೆಯ ದೇವಾಲಯದ ಬಂಗಾರುವಾಕಿಲಿಯ ಜೀರ್ಣೋದ್ಧಾರದ ಅಂಗವಾಗಿ ದ್ವಾರಪಾಲಕರ ಎರಡೂ ಬದಿಯ ತಾಮ್ರಫಲಕಗಳಿಗೆ ಚಿನ್ನದ ಗಿಲೀಟು ಮಾಡುವ ಕೆಲಸ ರೂ 24. 25 ಲಕ್ಷ ವೆಚ್ಚದಲ್ಲಿ ಕೈಗೊಳ್ಳಲಾಗುವುದೆಂದು ತಿಳಿಸಿದರು.

ತಿ. ತಿ. ದೇವಸ್ಥಾನಗಳ ಪರಿಧಿಯ ದೇವಾಲಯಗಳ ಸುರಕ್ಷಣಾ ವ್ಯವಸ್ಥೆಯನ್ನು ಬಲಗೊಳಿಸಲು ಈಗ ಇರುವ ಪೋಲೀಸ್ ಸಿಬ್ಬಂದಿಯೊಂದಿಗೆ ಇನ್ನೂ ಎರಡು ಪ್ಲಟೂನ್ ಹೆಚ್ಚಿನ ಸಿಬ್ಬಂದಿಯನ್ನು ನೀಡಲು ಸರ್ಕಾರವನ್ನು ಕೇಳಲು ತೀರ್ಮಾನಿಸಲಾಗಿದೆಯೆಂದರು.

## ತಿರುಮಲೆಯಲ್ಲಿ ಹೊಸ ಸಹಕಾರ್ಯನಿರ್ವಹಣಾಧಿಕಾರಿ

ತಿರುಮಲೆಯಲ್ಲಿ ಹೊಸ ಸಹಕಾರ್ಯನಿರ್ವಹಣಾಧಿಕಾರಿಯಾಗಿ ಶ್ರೀ ವೈ. ಚಕ್ರಧರ ರಾವ್ ಐ. ಎ. ಎಸ್. ಅವರು ಜನವರಿ 14ರಂದು ಅಧಿಕಾರವನ್ನು ಸ್ವೀಕರಿಸಿದರು ಅವರನ್ನು ಆಲಯದ ಪೇಷ್ಕಾರ್ ಶ್ರೀ ಪಟ್ಟಾಭಿರಾಮರೆಡ್ಡಿ, ಮಹಾದ್ವಾರದ ಪೇಷ್ಕಾರ್ ಶ್ರೀ ಜಿ. ಕೃಷ್ಣಮೂರ್ತಿ, ವಿಶೇಷಾಧಿಕಾರಿ ಶ್ರೀ ಆಂಜನೇಯುಲು ಅವರು ಸ್ವಾಗತಿಸಿದರು. ಇದರಿಂದಾಗಿ ಪ್ರಸ್ತುತ ತಿ. ತಿ. ದೇ. ಗಳಲ್ಲಿ ಮೂವರು ಐ. ಎ. ಎಸ್. ಅಧಿಕಾರಿಗಳು ಕಾರ್ಯನಿರ್ವಹಿಸುವಂತಾಗಿದೆ.

## ಡಿ. ಸುಬ್ಬರಾಯುಲು ಅವರ ಅಧಿಕಾರಾವಧಿಯ ಮುಂದುವರಿಕೆ

ತಿ.ತಿ.ದೇ.ಗಳ ಸಹಕಾರ್ಯನಿರ್ವಹಣಾಧಿಕಾರಿಯಾಗಿರುವ ಐ. ಎ. ಎಸ್. ಅಧಿಕಾರಿ ಶ್ರೀ ಡಿ. ಸುಬ್ಬರಾಯುಲು ಅವರ ಅಧಿಕಾರಾವಧಿಯನ್ನು ಮತ್ತೊಂದು ವರ್ಷ ಮುಂದುವರಿಸಬೇಕೆಂಬ ಸರ್ಕಾರದ ನಿರ್ಣಯವನ್ನು ತಿ. ತಿ. ದೇ. ಆಡಳಿತ ನಿರ್ವಾಹಕ ಮಂಡಳಿ ಒಪ್ಪಿಕೊಂಡಿದೆ.

ಶ್ರೀಯುತರ ಪದವಿಕಾಲ 1982 ಜನವರಿ 31 ರಂದು ಮುಗಿದಿತ್ತಾದರೂ, ಅವರ ದೀರ್ಘಸೇವೆ, ಆಡಳಿತ ಕೌಶಲ್ಯ, ಸಾಮರ್ಥ್ಯಗಳಿಂದಾಗಿ ಅವರ ಅಧಿಕಾರಾವಧಿಯನ್ನು ಒಂದೊಂದು ವರ್ಷದಂತೆ ಮುಂದುವರೆಸುತ್ತ ಬರಲಾಗಿದೆ.

## ತಿರುಮಲೆಯಲ್ಲಿ ಹೊಸ ಭವನಗಳು

ತಿರುಮಲೆಯ ಕಲ್ಯಾಣಕಟ್ಟೆಯಲ್ಲಿ ಯಾತ್ರಿಕರಿಗೆ ಹೆಚ್ಚಿನ ಸೌಲಭ್ಯವುಂಟುಮಾಡಲು ತಿ. ತಿ. ದೇ. ಕ್ರಮಗಳನ್ನು ಕೈಗೊಂಡಿದೆ. 24 ಲಕ್ಷ ರೂ.ಗಳ ವೆಚ್ಚದಲ್ಲಿ ಕಲ್ಯಾಣಕಟ್ಟೆ ಭವನ ಸಮುದಾಯವನ್ನು ಮತ್ತಷ್ಟು ವಿಸ್ತರಿಸಲಾಗುವುದು. ಈ ಹೊಸ ಭವನದಲ್ಲಿ ನಾಲ್ಕು ಅಂತಸ್ತುಗಳಿರುತ್ತವೆ. ಈ ಕೆಲಸ ಪೂರ್ಣಗೊಳ್ಳುತ್ತಲಿದೆ.

ಇದಲ್ಲದೆ ಯಾತ್ರಿಕರಿಗಾಗಿ ಆಧುನಿಕವಾದ ವೈಟಿಂಗ್‌ಹಾಲ್ ಒಂದನ್ನು (ಎರಡು ಅಂತಸ್ತುಗಳದು) 10 ಲಕ್ಷ ರೂ.ಗಳ ವೆಚ್ಚದಲ್ಲಿ ನಿರ್ಮಿಸಲಾಗುತ್ತಿದೆ. ಇವೆರಡೂ ಭವನಗಳು ಶೀಘ್ರದಲ್ಲಿಯೇ ಪೂರ್ಣಗೊಳ್ಳುವುವು. ಸನ್ನಿಧಿ ಬೀದಿಯಲ್ಲಿ 25 ಲಕ್ಷ ರೂಗಳ ವೆಚ್ಚದ ಆಸ್ಥಾನ ಮಂಟಪ ನಿರ್ಮಾಣಗೊಳ್ಳುತ್ತಿದೆ. ಇದರೊಂದಿಗೆ ವೈಕುಂಠ ತೋರಣದ ಕೆಲಸವೂ ತ್ವರಿತಗತಿಯಿಂದ ಸಾಗುತ್ತಿದೆ.

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು· ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
(2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

## ಶ್ರೀ ವೆಂಕಟೇಶ್ವರ ಗೀತ ಮಾಲಿಕೆ

ಅನ್ನಮಾಚಾರ್ಯ ಪ್ರಾಜೆಕ್ಟ್‌ನವರ ಸಹಕಾರದಿಂದ ವೇಟಪಾಳೆಂ ಗ್ರಾಮದಲ್ಲಿ ಸ್ಥಳೀಯ ಸಾರಸ್ವತ ನಿಕೇತನದವರು ಜನವರಿ 7 ರಂದು ಗೀತಾಜ್ಞಾನಯಜ್ಞ ವಾರ್ಷಿಕೋತ್ಸವವನ್ನು ನಿರ್ವಹಿಸಿದರು. ತತ್ಸಂದರ್ಭದಲ್ಲಿ ಶ್ರೀ ವೆಂಕಟೇಶ್ವರ ಗೀತ ಮಾಲಿಕೆ ಕಾರ್ಯಕ್ರಮವೂ ನಡೆಯಿತು. ಚೀರಾಲ ಸಕ್ಕರೆ ಕಾರ್ಖಾನೆಯ ನಿರ್ದೇಶಕ ಶ್ರೀ ಕೆ. ಜಿ. ಆದಿನಾರಾಯಣಗುಪ್ತ ಕಾರ್ಯಕ್ರಮವನ್ನು ಆರಂಭಿಸಿದರು. ನಿಕೇತನದ ಅಧ್ಯಕ್ಷ ಶ್ರೀ ಮಲ್ಲಿಕಾರ್ಜುನ ರಾವ್ ಅವರು ಕಾರ್ಯಕ್ರಮದ ವೈಶಿಷ್ಟ್ಯವನ್ನು ವಿವರಿಸಿದರು. ಪ್ರಾಜೆಕ್ಟ್ ಅಧಿಕಾರಿ ಶ್ರೀ ಕಾಮಿಶೆಟ್ಟಿಯವರು ಅನ್ನಮಯ್ಯನ ಗೀತೆಗಳಲ್ಲಿನ ವೆಂಕಟೇಶ್ವರ ವೈಭವವನ್ನು ವಿವರಿಸಿದರು. ಈ ಗೀತೆಗಳನ್ನು ಶ್ರೀ ಜಿ. ನಾಗೇಶ್ವರನಾಯುಡು ಶ್ರೀ ಜಿ. ಬಾಲಕೃಷ್ಣಪ್ರಸಾದ್, ಶ್ರೀ ಪಿ. ಎಸ್. ರಂಗನಾಥ್ ಹಾಡಿದರು. ಶ್ರೀ ಗೊಲ್ಲಪೂಡಿ ಸೀತಾರಾಂ ಆಂಧ್ರಪ್ರಭ ಸಂಪಾದಕರನ್ನೂ, ಕಲಾಕಾರರನ್ನೂ ಸನ್ಮಾನಿಸಿದರು.

## ಶ್ರೀನಿವಾಸ ಮಂಗಾಪುರ ದೇವಾಲಯದಲ್ಲಿ ಕಳ್ಳತನ

ಜನವರಿ ತಿಂಗಳ 30 ನೇ ದಿನ ರಾತ್ರಿ ಶ್ರೀನಿವಾಸ ಮಂಗಾಪುರದ ಶ್ರೀಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ ಕುಕೃತ್ಯಕಾರರು ಗೋಡೆಯನ್ನು ಹಾರಿ ಒಳ ಪ್ರವೇಶಿಸಿ ಅಲ್ಲಿದ್ದ ತಿ. ತಿ. ದೇ. ಕಾವಲುಗಾರರಿಬ್ಬರನ್ನೂ ಕೊಂದು ಹಲವಾರು ಆಭರಣಗಳನ್ನು ಕದ್ದೊಯ್ದರು. ಈ ಧಾಳಿಯ ಪ್ರಾಣ ಕಳೆದುಕೊಂಡ ಶ್ರೀ ಕೆ. ರಾಮಕೃಷ್ಣಾರೆಡ್ಡಿ ಹಾಗೂ ಜಯರಾಮರೆಡ್ಡಿ ಅವರುಗಳ ತ್ಯಾಗವನ್ನು ಶ್ಲಾಘಿಸಲಾಗಿದ್ದು ಮೃತರ ಆತ್ಮಕ್ಕೆ ಶಾಂತಿಯನ್ನೂ ಅವರ ಕುಟುಂಬದವರಿಗೆ ಸಹಾನುಭೂತಿಯನ್ನೂ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣರಾಜು ಅವರು ಸೂಚಿದ್ದಾರೆ.

## ತಿರುಮಲೇಶನಿಗೆ ಸ್ವರ್ಣಕಮಲ ಸೇವೆ

ಈಗಾಗಲೇ ನಲವತ್ತು ರೀತಿಯ ವಿವಿಧ ಆರ್ಜಿತ ಸೇವೆಗಳು ಹಾಗೂ ಇತರ ಸೇವೆಗಳಿಂದ ನಿತ್ಯ ಕಲ್ಯಾಣ ಪಚ್ಚತೋರಣದಿಂದ ಕಂಗೊಳಿಸುವ ತಿರುಮಲೆಯ ಸ್ವಾಮಿಗೆ ಹೊಸದಾದ ಸೇವೆಯು ಸೇರ್ಪಡೆಯಾಗಲಿದೆ. ಅದೆಂದರೆ ಸ್ವರ್ಣಕಮಲ ಸೇವೆ.

ತಿ. ತಿ. ದೇ. ಗಳ ಸ್ವರ್ಣಮಹೋತ್ಸವದ ನೆನಪಿನಲ್ಲಿ ಆಗಿನ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿಯವರು ದೇವರಿಗೆ ಹೊಸ ಸೇವೆ ಮಾಡುವ ಆಸಕ್ತಿ ತೋರಿದಾಗ ತಿ. ತಿ. ದೇ. ಆಸ್ಥಾನ ವಿದ್ವಾಂಸ ಪಂಡಿತ ಶ್ರೀ ಅಪ್ಪಿಕಟ್ಲ ಜಗನ್ನಾಥಾಚಾರ್ಯರು ಮರೀಚಿ ಸಂಹಿತೆಯಲ್ಲಿ ಉಕ್ತವಾಗಿರುವ ಸ್ವರ್ಣಕಮಲ ಸೇವೆಯನ್ನು ಸೂಚಿಸಿದ್ದರು. ಹಲವಾರು ಕಾರಣಗಳಿಂದ ಹಿಂದೆ ಬಿದ್ದ ಸೇವಾಯೋಜನೆ ಗುಪ್ತ ಭಕ್ತರೊಬ್ಬರು ದೇವರಿಗೆ 11 ಗ್ರಾಂ ತೂಕದ 108 ಸ್ವರ್ಣ ಕಮಲಗಳನ್ನು (ಅಂದಾಜುವೆಚ್ಚ 25 ಲಕ್ಷ ರೂಗಳು) ಸಮರ್ಪಿಸಿಕೊಂಡ ನಂತರ ಈಗ ಪ್ರತಿ ಮಂಗಳವಾರ ನಡೆಯುವಂತೆ ಯೋಜಿಸಲಾಗಿದೆ.

## ಉಚಿತ ಭೋಜನ ಯೋಜನೆ

ತಿರುಮಲೆಯಲ್ಲಿ ಯಾತ್ರಿಕರಿಗೆ ಉಚಿತ ಭೋಜನ ನೀಡುವ ಒಂದು ಯೋಜನೆಯನ್ನು ಶೀಘ್ರವೇ ಕಾರ್ಯಗತ ಗೊಳಿಸಲಾಗುವುದು.

ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣರಾಜು ಅವರು ಪತ್ರಕರ್ತರೊಂದಿಗೆ ಮಾತನಾಡುತ್ತ, ತಿ. ತಿ. ದೇ. ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನದಂತೆ ಮೊದಲಿಗೆ ದಿನವೊಂದಕ್ಕೆ ಒಂದು ಸಾವಿರ ಮಂದಿಗೆ ಉಚಿತ ಊಟದ ವ್ಯವಸ್ಥೆ ಮಾಡಲಾಗುವುದೆಂದು ತಿಳಿಸಿದರು. ದಾನಿಗಳಿಂದ ಅರ್ಥ ವೆಚ್ಚವನ್ನು ಸ್ವೀಕರಿಸುವುದರ ಮೂಲಕ ಕಾರ್ಯಗತಗೊಳಿಸಲಾಗುವ ಈ ಯೋಜನೆಯ ಕಾರ್ಯಭಾರವನ್ನು ಸೇವಾ ಸಂಸ್ಥೆಯಾದ ರಾಮಕೃಷ್ಣ ಮಿಷನ್‌ಗೆ ವಹಿಸಲಾಗುವುದೆಂದು ಅವರು ತಿಳಿಸಿದರು.

ಶ್ರೀ ಸತ್ಯನಾರಾಯಣರಾಜು ಅವರು ಮುಂದುವರಿದು ತಿರುಪತಿಯ ಶ್ರೀ ವೆಂಕಟೇಶ್ವರ ರೂಯಾ ಆಸ್ಪತ್ರೆಯಲ್ಲಿ ದಾಖಲಾಗುವ ರೋಗಿಗಳ ನೆರವಿಗರು ಉಳಿದುಕೊಳ್ಳಲು ರೂ. 7 ಲಕ್ಷದ ವೆಚ್ಚದಲ್ಲಿ ಒಂದು ಸತ್ರವನ್ನು ನಿರ್ಮಿಸಲಾಗುವುದೆಂದೂ ತಿಳಿಸಿದರು. ಈ ಉದ್ದೇಶಕ್ಕಾಗಿ ಈ ಮೊದಲು ನಿರ್ಮಾಣವಾದ ಕಟ್ಟಡದಲ್ಲಿ ಮೂಗಬಧಿರಾಂಧ ಪಾಠಶಾಲೆ ನಡೆಯುತ್ತಿದೆ ಎಂಬುದನ್ನು ಇಲ್ಲಿ ನೆನೆಯಬಹುದು.

ಬೋರ್ಡ್ ಅಧ್ಯಕ್ಷರು 'ಶ್ರೀಬಾಲಜೀ ವಿಕಲಾಂಗ ಸೇವಾ ಸಂಸ್ಥೆ'ಯು ತಿರುಪತಿಯಲ್ಲಿ ಒಂದು ಕೋಟಿ ರೂಗಳ ವೆಚ್ಚದ ಕಟ್ಟಡವನ್ನು ಹೊಂದುವುದೆಂದೂ ಆಗ ಕೃತಕ ಅವಯವ ಕೇಂದ್ರ, ವಿಕಲಾಂಗ ಶಿಕ್ಷಣ ತರಬೇತಿ ಕೇಂದ್ರ, ಹಾಗೂ ಮೂಗಬಧಿರಾಂಧ ಶಾಲೆ–ಇವು ಮೂರೂ ಒಂದೇ ಕಡೆಯಲ್ಲಿ ಕಾರ್ಯನಿರ್ವಹಿಸಲು ಸಾಧ್ಯವಾಗುವುದೆಂದೂ ತಿಳಿಸಿದರು.

ತಿ. ತಿ. ದೇ. ಗಳ ನಿರ್ವಹಣೆಯಲ್ಲಿರುವ ಎಲ್ಲ ಪುಷ್ಕರಿಣಿಗಳ ನೀರಿನ ಬರುವು ಹೋರವುಗಳೆರಡನ್ನೂ ಯಶಸ್ವಿಯಾಗಿ ನಿರ್ವಹಿಸಿ ಹೆಚ್ಚು ಜನ ಭಕ್ತರ ಸ್ನಾನಕ್ಕೆ ಅವಕಾಶ ಮಾಡಿ ಕೊಡಲಾಗುವುದೆಂದು ಅಧ್ಯಕ್ಷರು ನುಡಿದರು. ನಲಗೊಂಡದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ ನಿರ್ಮಾಣ ಮಾಡುವುದಾಗಿಯೂ ಅವರು ನುಡಿದರು.

ತಿರುಮಲೆಯ ಕಲ್ಯಾಣಕಟ್ಟೆಯ ಕ್ಷುರಕರ್ಮಿಗಳ ಸಂಬಳವನ್ನು 500 ರೂಗಳಿಂದ 750 ರೂಗಳಿಗೇರಿಸಲಾಗಿದೆಯೆಂದೂ ಅವರು ತಿಳಿಸಿದರು.

## ರವೀಂದ್ರಭಾರತಿಯಲ್ಲಿ 'ಕಲಾಮಂಗಲ' ಕಾರ್ಯಕ್ರಮಗಳು

ಆಂಧ್ರಪ್ರದೇಶದ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಹಾಗೂ ಸಂಗೀತ ನಾಟಕ ಅಕಾಡೆಮಿಗಳ ಸಂಯುಕ್ತ ಆಶ್ರಯದಲ್ಲಿ ಹೈದರಾಬಾದಿನ ರವೀಂದ್ರಭಾರತಿಯಲ್ಲಿ ಪ್ರತಿ ಮಂಗಳವಾರ ಕಲಾಮಂಗಲ ಕಾರ್ಯಕ್ರಮವು ಯೋಜಿತವಾಗಿದ್ದು ಇಲ್ಲಿ ಅನ್ನಮಯ್ಯ ಮೊದಲಾದ ವಾಗ್ಗೇಯಕಾರರ ಸಾಹಿತ್ಯ ಪ್ರಸಾರ ಮಾಡಲಾಗುವುದೆಂದು ತಿಳಿದು ಬಂದಿದೆ. ಸಂಗೀತ, ನೃತ್ಯ, ನಾಟಕ ರೂಪಗಳಲ್ಲಿ ಈ ಕಾರ್ಯಕ್ರಮಗಳನ್ನು ಪ್ರತಿವಾರವೂ ನೀಡುವುದರಿಂದ ಸಧ್ಯದ ಅತಿತ್ವರೆಯ ನಾಗರಿಕತೆಯಿಂದ ತುಸು ಕಾಲವಾದರೂ ಬಿಡುಗಡೆ ಲಭಿಸಿ, ಸಂಸ್ಕೃತಿಯ ಹಿರಿಯ ಪರಂಪರೆ, ಮೌಲ್ಯಗಳತ್ತ ಜನರ ಗಮನವನ್ನು ಸೆಳೆಯಲು ಸಾಧ್ಯವಾಗುವುದೆಂದು ಉದ್ದೇಶಿಸಲಾಗಿದೆ.

ಈಚೆಗೆ ನೀಡಲಾದ ಕಲಾಮಂಗಲದ ಒಂದು ಕಾರ್ಯಕ್ರಮ ಎಂದರೆ ತಿ. ತಿ. ದೇ. ಅನ್ನಮಾಚಾರ್ಯ ಪ್ರಾಜೆಕ್ಟಿನ 'ಅನ್ನಮಾಚಾರ್ಯ ಗೀತ ಮಾಲಿಕೆ' ವಿಶೇಷಾಧಿಕಾರಿ ಶ್ರೀ ಕಾಮಿಶೆಟ್ಟಿ ಶ್ರೀನಿವಾಸು ಶೆಟ್ಟಿಯವರ ಪೀಠಿಕೆ, ವ್ಯಾಖ್ಯಗಳಿಂದ ತುಂಬಿದ ಅನ್ನಮಾಚಾರ್ಯ ಕೃತಿಗಳನ್ನು ಸರ್ವಶ್ರೀ ಬಾಲಕೃಷ್ಣ ಪ್ರಸಾದ್, ನಾಗೇಶ್ವರನಾಯುಡು, ರಂಗನಾಥ್ ಅವರುಗಳು, ಭಕ್ತಿ, ಭಾವ, ತುಂಬಿ ಹಾಡಿದರು. ಸಂಗೀತ, ಸಾಹಿತ್ಯ ರಸಿಕರು ಆನಂದ ಪರವಶರಾಗುವಂತೆ, ಕಾರ್ಯಕ್ರಮ ಯಶಸ್ವಿಯಾಯಿತು.

(ಕೃಪೆ - ನ್ಯೂಸ್‌ಟೈಂ.)

ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ ಏಪ್ರಿಲ್ — 1985**

**ಅದ್ವೈತಕ್ಕೆ ರಾಜಾಶ್ರಯ**
— ಕೆ. ರಮಾನಂದ

**ಅದ್ವೈತ ದರ್ಶನ**
— ಡಿ. ಕೃಷ್ಣ ಅಯ್ಯಂಗಾರ್

**ವಿಷ್ಣು ಸಹಸ್ರನಾಮ ಸ್ತೋತ್ರಂ**
— ಡಾ॥ ಎಸ್. ಅನಂತರಂಗಾಚಾರ್

**ಆದರ್ಶ ಗುರು ಶಿಷ್ಯರು**
— ವಿ. ಎಸ್. ರಾಮಾನುಜಾಚಾರ್ಯ

**ದಾಸಸಾಹಿತ್ಯದಲ್ಲಿ ಮಾನವೀಯ ಮೌಲ್ಯಗಳು**
— ವಸಂತ ಕುಷ್ಟಗಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ — ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಏಪ್ರಿಲ್ 1985

| | | |
|---|---|---|
| 3 | ಬುಧವಾರ | ಶ್ರೀ ವೆಂಕಟೇಶ್ವರಸ್ವಾಮಿಯವರ ವಸಂತೋತ್ಸವಾರಂಭ. |
| 4 | ಗುರುವಾರ | ಶ್ರೀ ವೆಂಕಟೇಶ್ವರಸ್ವಾಮಿಯವರ ರಜತ ರಥೋತ್ಸವ. |
| 5 | ಶುಕ್ರವಾರ | ಶ್ರೀ ವೆಂಕಟೇಶ್ವರಸ್ವಾಮಿಯವರ ವಸಂತೋತ್ಸವ ಸಮಾಪ್ತಿ. |
| 13 | ಶನಿವಾರ | ಮೇಷ ಸಂಕ್ರಮಣ, ಸೌರ ಸಂವತ್ಸರಾದಿ. |
| 16 | ಮಂಗಳವಾರ | ಶ್ರೀ ಭಾಷ್ಯಕಾರ ಉತ್ಸವ ಪ್ರಾರಂಭ. |
| 22 | ಸೋಮವಾರ | ಶಿವಾಜಿ ಜಯಂತಿ. |
| 23 | ಮಂಗಳವಾರ | ಬಸವ ಜಯಂತಿ. |
| 25 | ಗುರುವಾರ | ಶಂಕರಾಚಾರ್ಯ ಜಯಂತಿ. |
| 30 | ಮಂಗಳವಾರ | ವಾಸವೀಜಯಂತಿ. |

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯು ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

స్వరములు స్వనముల
పరువిడు నురుగుల

తత్తరి ఝంతరి
ఝుత్తరి ధంతరి
తకఝం తద్ధిమి
నకఝం ధిద్ధిమి
ధాకిట తకఝం
తాకిట తఝుఝం
తాం-తిధిగిణతోం
ధాం-గిధగిణతోం

జతులను సడిగొన
గతులను వడిగొన
ఎత్తుగ తిరగలు

హత్తగ జలమాలు
మద్దెల మ్రోతల
నద్దిన హద్దుల

భంగాభంగ త
రంగచయాంగము
రంగోత్తుంగ త
రంగిత రంగము

పాలవెల్లిపై
శ్రీలవల్లియై
ప్రభవ మొందెనట!
అభినయించెనట!

— సిరికన్నె!—ఆ

— సిరికన్నె!

